# ಸಿ. ವಿ. ಕೆರಿಮನಿಯವರ
# ಸಂಶೋಧನೆ ಹಾಗೂ ವ್ಯಕ್ತಿ ಚಿತ್ರಣಗಳು

ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ

ಸಂಶೋಧಕರು
**ಶ್ರೀ ಮಲ್ಲಿಕಾರ್ಜುನ ಶಿದ್ರಾಮಪ್ಪ ಇಂಚಲ**
ಮು/ಪೋ. ಯರಝರ್ವಿ
ತಾ : ಸವದತ್ತಿ ಜಿ : ಬೆಳಗಾವಿ

ಮಾರ್ಗದರ್ಶಕರು
**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು, ಬಿ. ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ. ಜಿ. ಬೆಳಗಾವಿ.



**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

**೨೦೧೪-**

# ಸಿ. ವಿ. ಕೆರಿಮನಿಯವರ ಸಂಶೋಧನೆ ಹಾಗೂ ವ್ಯಕ್ತಿ ಚಿತ್ರಣಗಳು

ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ

ಸಂಶೋಧಕರು
**ಶ್ರೀ ಮಲ್ಲಿಕಾರ್ಜುನ ಶಿದ್ರಾಮಪ್ಪ ಇಂಚಲ**
ಮು/ಪೋ. ಯರಝರ್ವಿ
ತಾ : ಸವದತ್ತಿ ಜಿ : ಬೆಳಗಾವಿ

ಮಾರ್ಗದರ್ಶಕರು
**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು, ಬಿ. ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ. ಜಿ. ಬೆಳಗಾವಿ.




**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

**೨೦೧೩-೧೪**

# ಧೃಢೀಕರಣ ಪತ್ರ

ಶ್ರೀ ಮಲ್ಲಿಕಾರ್ಜುನ ಶಿದ್ರಾಮಪ್ಪ ಇಂಚಲ ಇವರು **'ಪ್ರೊ. ಸಿ. ವಿ. ಕೆರಿಮನಿಯವರ ಸಂಶೋಧನೆ ಹಾಗೂ ವ್ಯಕ್ತಿ ಚಿತ್ರಣಗಳು'** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : 30-೦೭-೨೦೧೩

**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು,
ಬಿ. ಆರ್. ದರೂರ ಸಂಶೋಧನಾ
ಕೇಂದ್ರ, ಹಾರೂಗೇರಿ.
ಜಿ. ಬೆಳಗಾವಿ.

# ಪ್ರಮಾಣ ಪತ್ರ

'**ಪ್ರೊ. ಸಿ. ವಿ. ಕೆರಿಮನಿಯವರ ಸಂಶೋಧನೆ ಹಾಗೂ ವ್ಯಕ್ತಿ ಚಿತ್ರಣಗಳು**' ಎಂಬ ಶೀರ್ಷಿಕೆಯ ನಿಬಂಧವನ್ನು **ಡಾ. ಬಿ. ಎಸ್. ಮಾಳಿ** ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. **ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : 30-೦೭-೨೦೧೩

**ಶ್ರೀ ಮಲ್ಲಿಕಾರ್ಜುನ ಶಿದ್ರಾಮಪ್ಪ ಇಂಚಲ**
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ.

# ಕೃತಜ್ಞತೆಗಳು

೨೦೦೪-೦೫ ನೆಯ ಸಾಲಿನಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಡಾ. ಆರ್. ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದಲ್ಲಿ ಸ್ನಾತಕೋತ್ತರ ಎಂ.ಎ. ಅಂತಿಮ ವರ್ಷ ಓದುತ್ತಿದ್ದೆ. ಆಗ ನನ್ನ ಸಹಪಾಠಿ ಸಂಪದಾ ಕೆರಿಮನಿಯವರ ಪರಿಚಯವಾಯಿತು. ಸಂಪದಾ ಕೆರಿಮನಿಯವರು ಸಿ. ವಿ. ಕೆರಿಮನಿಯವರ ಮಗಳು. ಹಾಗೆಯೇ ಅಧ್ಯಯನ ಪೀಠದ ಮುಂಭಾಗ ನಾವೆಲ್ಲ ಗೆಳೆಯರು ಕೂಡಿಕೊಂಡು ಹರಟುತ್ತ ಕುಳಿತಾಗ ತಮ್ಮ ತಂದೆಯ ಸಾಹಿತ್ಯ ಸಾಧನೆಯ ಬಗ್ಗೆ ಅತೀವ ಹೆಮ್ಮೆಯಿಂದ ನಮಗೆ ತಿಳಿಸಿದರು. ಆಗಲೇ ಇವರ ಸಾಹಿತ್ಯ ಸಾಧನೆಯ ಮೇಲೆ ಸಂಪ್ರಬಂಧವನ್ನು ಸಿದ್ಧಪಡಿಸಬೇಕೆಂದುಕೊಂಡಿದ್ದೆ. ಕಾರಣಾಂತರಗಳಿಂದ ನನ್ನ ಆಸೆ ಕೈಗೂಡಲಿಲ್ಲ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಅಧೀನ ಬಿ. ಆರ್. ದರೂರ ಸಂಶೋಧನಾ ಕೇಂದ್ರದವರು ಎಂ.ಫಿಲ್. ಪದವಿಗೆ ಅರ್ಜಿ ಆಹ್ವಾನಿಸಿತ್ತು. ಗುರುಗಳಾದ ಡಾ. ವ್ಹಿ. ಎಸ್. ಮಾಳಿಯವರಿಗೆ ಭೇಟಿಯಾಗಿ ನನ್ನ ಆಸೆಯನ್ನು ವ್ಯಕ್ತಪಡಿಸಿದಾಗ ನನಗೆ ಸಂಶೋಧನೆ ಕೈಕೊಳ್ಳಲು ಅನುಮತಿ ನೀಡಿದರು. ನನ್ನ ಈ ಸಂಶೋಧನಾ ಕಾರ್ಯಕ್ಕೆ ಮಾರ್ಗದರ್ಶನ ಮಾಡಿದ ಡಾ. ವ್ಹಿ. ಎಸ್. ಮಾಳಿಯವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ನನ್ನ ಈ ಕಾರ್ಯಕ್ಕೆ ಎಲ್ಲ ಸಹಾಯ ಸಹಕಾರ ನೀಡಿ ಸಂಶೋಧನೆ ಕೈಕೊಳ್ಳಲು ಅನುಮತಿ ನೀಡಿದ ಹಿರಿಯರಾದ ಸಿ. ವಿ. ಕೆರಿಮನಿಯವರನ್ನು ಮನಸಾರೆ ಸ್ಮರಿಸುತ್ತೇವೆ. ಅವರ ಚಿರಂಜೀವಿ ಸೋಮಶೇಖರನಿಗೂ ಧನ್ಯವಾದಗಳು ಸಲ್ಲುತ್ತದೆ.

ನಾನು ಕೆಲಸ ನಿರ್ವಹಿಸಿವ ಕೆ.ಆರ್.ಸಿ.ಇ. ಪದವಿ ಪೂರ್ವ ಕಾಲೇಜಿನ ಪ್ರಾಚಾರ್ಯರು ಹಾಗೂ ಸಹೋದ್ಯೋಗಿ ಮಿತ್ರರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ. ನನ್ನ ಗುರುಗಳಾದ ಪ್ರೋ. ಸಿ. ವಿ. ಜ್ಯೋತಿ, ಡಾ. ಎಸ್. ವಾಯ್. ಚಲವಾದಿಯವರು ಸದಾ ನನ್ನ ಬೆನ್ನು ತಟ್ಟಿ ಪ್ರೋತ್ಸಾಹಿಸುತ್ತಾ ಬಂದಿದ್ದಾರೆ. ಅವರಿಗೆ ನನ್ನ ಅನಂತ ವಂದನೆಗಳು.

ಕಾರ್ಯ ಬಾಹುಳ್ಯದ ನಡುವೆ ಅಧ್ಯಯನವನ್ನು ಕೈಬಿಟ್ಟಾಗ ಸ್ನೇಹಿತರಾದ ಶ್ರೀ ಆನಂದ ಕುಮಾರ ಬ. ಪಾಟೀಲ ಅವರು ನೆನಪಿಸಿ ನನ್ನ ಕಾರ್ಯದಲ್ಲಿ ಬಹಳ ಉಪಕಾರ ಮಾಡಿದ್ದಾರೆ. ಅವರನ್ನು ಪ್ರೀತಿಯಿಂದ ಸ್ಮರಿಸುತ್ತೇನೆ. ಶೈಕ್ಷಣಿಕವಾಗಿ ನಾನು ಏನೇ ಮಾಡಿದರೂ ಸದಾ ನನ್ನನ್ನು ಪ್ರೋತ್ಸಾಹಿಸುತ್ತಾ ಆನಂದಪಡುವ ನನ್ನ ಕುಟುಂಬವರ್ಗದವರನ್ನು ವಿನಮ್ರತೆಯಿಂದ ನೆನೆಯುತ್ತೇನೆ.

ನನ್ನ ಈ ಸಂಶೋಧನಾ ಕಾರ್ಯಕ್ಕೆ ನಿಯಮಿತವಾಗಿ ಮಾಹಿತಿಯನ್ನು ತಲುಪಿಸಿದ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಶ್ರೀ. ಎಸ್. ಟಿ. ಘಟನಟ್ಟಿಯವರಿಗೂ ಕಡಿಮೆ ಅವಧಿಯಲ್ಲಿ ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿದ ಜಮಖಂಡಿಯ ಶ್ರೀ ಮುರಗೇಶ ಕೌಲಾಪೂರ ಅವರಿಗೂ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ದಿ : ೩೦ -೦೭-೨೦೧೫

**ಶ್ರೀ ಮಲ್ಲಿಕಾರ್ಜುನ ಶಿದ್ರಾಮಪ್ಪ ಇಂಚಲ**

ಮು.ಪೋ. ಯರಝರ್ವಿ.

ತಾ. ಸವದತ್ತಿ. ಜಿ. ಬೆಳಗಾವಿ.

# • ಪರಿವಿಡಿ •

## ಅಧ್ಯಾಯ – ೧ :
# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಆಕರಗಳು

### ೧.೧ ಅಧ್ಯಾಯನದ ಉದ್ದೇಶ :

ಸಾಹಿತ್ಯ ವ್ಯಕ್ತಿಯ ಸೃಷ್ಟಿಯಾದರೂ ಅದು ಸಮೂಹದ ಸ್ವತ್ತು ಮಕ್ಕಳ ತಂದೆಯ ಹೆಸರು ಹೇಳುವಂತೆ ಕೃತಿಗಳು ತಮ್ಮ ತಂದೆಯಾದ ಲೇಖಕನನ್ನು ಸಹೃದಯನಿಗೆ ನೆನಪಿಸುತ್ತ ಹೋಗುತ್ತವೆ. ವ್ಯಕ್ತಿ ಮರೆಯಾಗುತ್ತಾನೆ, ಆದರೆ ಅವನಿಂದ ರಚಿತವಾದ ಸಾಹಿತ್ಯ ಮಾತ್ರ ಮರೆಯಾಗುವದಿಲ್ಲ. ಅನುಭವ ಅಕ್ಷರ ರೂಪ ಪಡೆದು ಸಾಹಿತ್ಯವೆನ್ನುವ ಒಂದು ಅಭಿವ್ಯಕ್ತಿ ಕ್ರಿಯೆಯ ಅದ್ಭುತ ಇತಿಹಾಸವನ್ನು ಅಧ್ಯಯನ ಮಾಡುವುದು ನಿಜಕ್ಕೂ ರೋಚಕವಾದದು, ಕಾಲ, ದೇಶ ಪ್ರದೇಶಗಳ ಗಡಿಯನ್ನು ಮೀರಿ ಸಾಹಿತ್ಯ ಕೃತಿಗಳು, ಸಂಶೋಧನೆಗಳು, ತಮ್ಮದೇ ಆದ ಒಂದು ಭೌತಿಕ ಪ್ರಖರ ವಿನ್ಯಾಸವನ್ನು ಸಮಾಜದ ಮುಂದೆ ವ್ಯಕ್ತ ಪಡಿಸುವಾಗ ಅವುಗಳ ನಿಜವಾದ ಸತ್ವ ಹಾಗೂ ಸೌಂದರ್ಯದ ವಿಮರ್ಶೆ ಕೆಲವು ನಿರ್ದಿಷ್ಟ ಹಿನ್ನೆಲೆಗಳಲ್ಲಿ ನಡೆಯುವುದು ತೀರಾ ಅವಶ್ಯಕವೆನಿಸುತ್ತದೆ. ಅಂತಹ ಸಾಹಿತ್ಯ ಅಧ್ಯಯನ ನಿರಂತರವಾದದ್ದು. ಅಭ್ಯಸಿಸುವದು ಒಂದು ಹೊಸಹೊಸ ಅಧ್ಯಯನಗಳ ಹೊಳವು ಹಾಗೂ ಅರ್ಥಗಳನ್ನು ಹೊರಸೂಸುತ್ತವೆ. ಅಂತಹ ಅನುಭವಜನ್ಯ ಸಾಹಿತ್ಯಕ್ರಿಯೆ ಸಂಶೋಧನೆಯ ರೂಪ ಪಡೆಯಬೇಕಾದರೆ, ಸಂಶೋಧಕನ ಸಮಯ ಪ್ರಜ್ಞೆ ಹಾಗೂ ಸ್ಪಷ್ಟತೆ, ನಿಖರತೆಯ ಅಂಶಗಳಲ್ಲಿ ಅದರಲ್ಲಿ ಒಳಗೊಂಡಿರುತ್ತವೆ.

ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಮೊರಬ ಎಂಬ ಗ್ರಾಮದಲ್ಲಿ ಜನಿಸಿದ ಸಿ.ವಿ. ಕೆರಿಮನಿಯವರು ವಿದ್ಯಾರ್ಥಿ ಜೀವನದಲ್ಲಿ ಅನೇಕ ಕಷ್ಟಗಳನ್ನು ಎದುರಿಸಿದವರು. ಒದಗಿದ ಸಂಕಷ್ಟಗಳನ್ನೆಲ್ಲಾ ಮೆಟ್ಟಿನಿಂತು ಜೀವನದಲ್ಲಿ ಏನಾದರೂ ಸಾಧಿಸಬೇಕೆಂಬ ಅವರ ಅದಮ್ಯ ಉತ್ಸಾಹ ಎಂದೂ ಬತ್ತಲಿಲ್ಲ. ತನ್ಮೂಲಕ ಕರ್ನಾಟಕ ವಿಶ್ವವಿದ್ಯಾಲಯದಿಂದ ಕನ್ನಡ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪೂರೈಸಿಕೊಂಡು ತಮ್ಮ ವೃತ್ತಿ ಜೀವನವನ್ನು ಕನ್ನಡ ಉಪನ್ಯಾಸಕರಾಗಿ ಲಕ್ಷ್ಮೇಶ್ವರದಲ್ಲಿ ಪ್ರಾರಂಭಿಸಿದರು. ಏನಾದರೂ ಒಂದು ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಸದಾ ಕ್ರೀಯಾಶೀಲರಾಗಿರುತ್ತಿದ್ದ ಸಿ. ವಿ. ಕೆರಿಮನಿಯವರು ಹತ್ತು ಹಲವು ಸಂಘ ಸಂಸ್ಥೆಗಳೊಂದಿಗೆ ತಮ್ಮನ್ನು ಗುರುತಿಸಿಕೊಂಡು ಅವರೊಂದಿಗೆ ಬೆಳೆದವರು. ಅವರದು ಒಂದು ವರ್ಣ ರಂಜಿತ ಬದುಕು.

ಕವಿರಾಜಮಾರ್ಗಕಾರನ ಕಾಲಕ್ಕೆ ' ಪುಲಿಗೆರೆ' ಅಂದರೆ ಈಗಿನ ಲಕ್ಷ್ಮೇಶ್ವರ ತಿರುಳ್ಗನ್ನಡದ ಬೀಡಾಗಿತ್ತು. ಕನ್ನಡ ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ ಸಿ. ವಿ. ಕೆರಿಮನಿಯವರು ತಮ್ಮ ಜೀವನದುದ್ದಕ್ಕೂ

ಕನ್ನಡ ಭಾಷೆ, ಸಾಹಿತ್ಯ ಹಾಗೂ ನಾಡು ನುಡಿಗಾಗಿ ಶ್ರಮವಹಿಸಿ ದುಡಿಯಲಿಕ್ಕೆ ಪ್ರೇರಣೆ ಪುಲಿಗೆರೆಯ ತಿರುಳ್ಗನ್ನಡ ಹಾಗೂ ಕ್ಷೇತ್ರಾಧಿದೇವತೆ ಲಕ್ಷ್ಮೇಶ್ವರದ ಶ್ರೀ ಸೋಮೇಶ್ವರನ ಆಶೀರ್ವಾದ.

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ "ಲಕ್ಷ್ಮೇಶ್ವರ" ಐತಿಹಾಸಿಕವಾಗಿ ಹಾಗೂ ಸಾಹಿತ್ಯಿಕವಾಗಿ ಅತ್ಯಂತ ಪ್ರಭುದ್ಧ ಹಾಗೂ ಪರಿಪೂರ್ಣ ಇತಿಹಾಸವನ್ನು ಹೊಂದಿದ ಊರು. ಇಂಥ ಪರಿಸರದಲ್ಲಿ ಪುರಸಭೆಯ ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯದ ಕನ್ನಡ ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ ಸಿ.ವ್ಹಿ. ಕೆರಿಮನಿಯವರ ಸಾಹಿತ್ಯದ ಬಗ್ಗೆ ಅವರಿಗಿದ್ದ ಶ್ರದ್ಧೆ ಮತ್ತು ಸಂಶೋಧನಾ ಪ್ರತಿಭೆ ಈ ಪರಿಸರದಿಂದ ಪ್ರೇರಣೆ ಪಡೆದು ಅದನ್ನು ಸಮರ್ಥವಾಗಿ ಬಳಸಿಕೊಂಡರು. ತನ್ಮೂಲಕ ಸಾಹಿತ್ಯದಲ್ಲಿ ತಮ್ಮ ಹೆಸರನ್ನು ದಾಖಲಿಸಿದರು, ಲೇಖಕನಿರಲಿ, ಸಂಶೋಧಕನಿರಲಿ, ಕಲಾವಿದನಿರಲಿ ಅವನು ಜನಸಮುದಾಯದ ಮಧ್ಯೆ ಬೆಳೆಯದಿದ್ದರೆ ಆ ಸಮುದಾಯದ ನಿಜವಾದ ಆಶೆ ಆತಂಕಗಳನ್ನು ನೇರ ಸಂಪರ್ಕದಿಂದ ಅರ್ಥ ಮಾಡಿಕೊಳ್ಳದಿದ್ದರೆ, ಅವನ ಬರಹವಾಗಲಿ, ಕಲೆಯಾಗಲಿ ಕೇವಲ ಕಟ್ಟು ಕಥೆಯಾಗುತ್ತದೆ ವಿನಹ ಅರ್ಥಪೂರ್ಣವಾಗಲಾರದು. ಅಂತಹ ವಿಶಿಷ್ಠ ಸಂಶೋದಕ ತನ್ನ ಜೀವನದುದ್ದಕ್ಕೂ ಅನೇಕ ಸಂಘಸಂಸ್ಥೆಗಳ ಒಡನಾಟವನ್ನು ಹೊಂದಿ ಸಾಮಾಜಿಕ ಪರಿಸರದಲ್ಲಿಯೂ ಹೆಸರು ಮಾಡಿದ ಕೀರ್ತಿ ಸಿ. ವಿ. ಕೆರಿಮನಿಯವರಿಗೆ ಸಲ್ಲುತ್ತದೆ.

ಸಂಶೋಧನೆ, ಸಂಪಾದನೆ ಹಾಗೂ ಲಕ್ಷ್ಮೇಶ್ವರ ಪರಿಸರದ ಕೆಲವು ಮಹಾನುಭಾವರ ಜೀವನ ಚಿತ್ರಗಳನ್ನೊಳಗೊಂಡ ವ್ಯಕ್ತಿ ಜಿತ್ರಗಳನ್ನು ತಮ್ಮ ಸಾಹಿತ್ಯದ ಕ್ಷೇತ್ರವನ್ನಾಗಿರಿಸಿಕೊಂಡು ಸರಿ ಸುಮಾರು ಇಪ್ಪತ್ತೈದಕ್ಕೂ ಮಿಕ್ಕಿ ಕೃತಿಗಳನ್ನು ಹೊರತಂದಿದ್ದಾರೆ. ಗಾತ್ರದಲ್ಲಿ ಚಿಕ್ಕವುಗಳಾದರೂ ಕೂಡಾ ಆ ಕೃತಿಗಳು ಒದಗಿಸುವ ಮಾಹಿತಿ ಆಗಾಧವಾದದು. ಸಿ. ವಿ. ಕೆರಿಮನಿಯವರ ಸಾಹಿತ್ಯ ಸಾಧನೆಗಾಗಿ ಅನೇಕ ಪ್ರಶಸ್ತಿಗಳು ಅವರನ್ನು ಅರಸಿಕೊಂಡು ಬಂದಿವೆ.

'ಶರೀಫ ಪ್ರಶಸ್ತಿ' ೨೦೦೦ ನೇ ಸಾಲಿನಲ್ಲಿ 'ರಾಜ್ಯಮಟ್ಟದ ಮನುಕುಲದ' ಪ್ರಶಸ್ತಿ. ೨೦೦೬ ರಲ್ಲಿ, 'ಅಮೋಘ ವರ್ಷ ನೃಪತುಂಗ' ಪ್ರಶಸ್ತಿ ಹಾಗೂ ೨೦೧೨ ರಲ್ಲಿ 'ಕನ್ನಡ ರಾಜ್ಯೋತ್ಸವ' ಪ್ರಶಸ್ತಿಗಳು ಜೊತೆಗೆ ಇನ್ನೂ ಅನೇಕ ಪ್ರಶಸ್ತಿಗಳು ಇವರಿಗೆ ಸಂದಿವೆ. ಇಂತಹ ವರ್ಣರಂಜಿತ ವ್ಯಕ್ತಿತ್ವದ ಸಿ. ವಿ. ಕೆರಿಮನಿಯವರ ಸಂಶೋಧನೆ ಹಾಗೂ ವ್ಯಕ್ತಿ ಚಿತ್ರಣಗಳ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

## ೧.೨ ಅಧ್ಯಾಯನದ ಸ್ವರೂಪ :

ಮೊದಲನೆಯ ಅಧ್ಯಾಯದಲ್ಲಿ ಸಿ. ವಿ. ಕೆರಿಮನಿಯವರು ಕನ್ನಡ ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ ಪ್ರವೃತ್ತಿಗಾಗಿ ಕೈಗೊಂಡ ಕೆಲವು ಸಂಶೋಧನೆಗಳು ಹಾಗೂ ಆಗಿನ ಕಾಲದ ಕೆಲವು

ಪ್ರಮುಖ ವ್ಯಕ್ತಿಗಳ ವ್ಯಕ್ತಿ ಚಿತ್ರಣಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಸಿ. ವಿ. ಕೆರಿಮನಿಯವರ ಎಲ್ಲ ಕೃತಿಗಳನ್ನು ಪ್ರಾಮಾಣಿಕವಾದ ಅಧ್ಯಯನಕ್ಕೆ ಒಳಪಡಿಸಿದ್ದೇನೆ. ಅವುಗಳಲ್ಲಿರುವ ಮೌಲ್ಯಗಳನ್ನು ಗುರುತಿಸಿ ಪುನರ್‌ಸ್ಮರಣೆ ಹಾಗೂ ವ್ಯವಸ್ಥಿತ ದಾಖಲೆ ಮಾಡುವಲ್ಲಿ ಪ್ರಯತ್ನಿಸಲಾಗಿದೆ.

ಸಿ. ವಿ. ಕೆರಿಮನಿಯವರ ಜೀವನ ವಿಶಿಷ್ಠತೆಯ ಜೊತೆಗೆ ಅವರ ಸಂಶೋಧನೆ ಮತ್ತು ವ್ಯಕ್ತಿ ಚಿತ್ರಣಗಳ ಬಗ್ಗೆ ವಿಸ್ತೃತ ಅಧ್ಯಯನ ಕೈಗೊಳ್ಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಸಿ. ವಿ. ಕೆರಿಮನಿಯವರ ಬಾಲ್ಯಜೀವನ, ವಿದ್ಯಾಭ್ಯಾಸ, ವೃತ್ತಿ ಜೀವನ, ವ್ಯಕ್ತಿತ್ವ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಿ. ವಿ. ಕೆರಿಮನಿಯವರ ಕೊಡುಗೆಯ ಜೊತೆಗೆ ಅವರ ಒಟ್ಟಾರೆ ಸಾಹಿತ್ಯದ ಸ್ಥೂಲ ನೋಟದ ಅಧ್ಯಯನ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಪ್ರಸ್ತುತ ಮೂರನೆಯ ಅಧ್ಯಾಯದಲ್ಲಿ ಸಿ. ವಿ. ಕೆರಿಮನಿಯವರ ಒಟ್ಟು ಕೃತಿಗಳಲ್ಲಿ ಕಂಡುಬರುವ ಪ್ರಮುಖ ಕ್ಷೇತ್ರಗಳ ಬಗ್ಗೆ ಸಿ. ವಿ. ಕೆರಿಮನಿಯವರು ಕೈಗೊಂಡ ಸಂಶೋಧನಾ ಲೇಖನಗಳನ್ನು ಈ ಅಧ್ಯಾಯದಲ್ಲಿ ದಾಖಲಿಸಲಾಗಿದೆ. ಸಾಂಸ್ಕೃತಿಕ ಹಾಗೂ ಧಾರ್ಮಿಕ ಕ್ಷೇತ್ರಗಳಿಗೆ ಸಂಬಂಧಿಸಿದ ಅಧ್ಯಯನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅದು ಅಲ್ಲದೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅವರು ಪ್ರಕಟಪಡಿಸಿದ ಪ್ರಮುಖ ಸಾಹಿತ್ಯ ಕೃತಿಗಳ ವಿಶ್ಲೇಷಣೆಯನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕನ್ನಡದಲ್ಲಿ ಅತೀ ಹೇರಳವಾಗಿ ರಚನೆಯಾಗಿರುವ ಒಂದು ಆಧುನಿಕ ಕನ್ನಡ ಸಾಹಿತ್ಯ ಪ್ರಕರಣಗಳಲ್ಲಿ ಒಂದಾದ ವ್ಯಕ್ತಿಚಿತ್ರಣಗಳು ಅಧ್ಯಯನದ ಮಹತ್ವವನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಕನ್ನಡ ನಾಡು ಕಂಡ ಶ್ರೇಷ್ಠ ವ್ಯಕ್ತಿಗಳ, ಶರಣರ, ಸಹಕಾರಿ ಧುರೀಣರ ಹಾಗೂ ಇನ್ನಿತರ ಗಣ್ಯ ವ್ಯಕ್ತಿಗಳ ಬಗ್ಗೆ ಸಿ. ವಿ. ಕೆರಿಮನಿಯವರು ಬರೆದಿರುವ ವ್ಯಕ್ತಿ ಚಿತ್ರಣಗಳನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ. ಈ ಎಲ್ಲರ ಬಗೆಗೆ ಅವರ ವ್ಯಕ್ತಿತ್ವ ಹಾಗೂ ಸಾಮಾಜಿಕ, ಸಾಂಸ್ಕೃತಿಕ ರಂಗಕ್ಕೆ ಅವರು ನೀಡಿರುವ ಕೊಡುಗೆಗಳನ್ನು ಸ್ಮರಿಸುವ ಮತ್ತು ಅವುಗಳನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಕೊನೆಯ ಅಧ್ಯಾಯ ಸಮಾರೋಪದಲ್ಲಿ ಕನ್ನಡ ಸಿ. ವಿ. ಕೆರಿಮನಿಯವರು ತಮ್ಮ ವೃತಿಯುದ್ದಕ್ಕೂ ಪ್ರವೃತ್ತಿಯಾಗಿ ಪ್ರಕಟಿಸಿರುವ ಸಂಶೋಧನೆ ಹಾಗೂ ವ್ಯಕ್ತಿ ಚಿತ್ರಗಳ ಆಶಯ ಮತ್ತು ಫಲಶೃತಿಯನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇನ್ನು ಮುಂದೆ ಸಿ. ವಿ. ಕೆರಿಮನಿಯವರ ಬಗೆಗೆ ಮುಂದೆ ಕೈಗೊಳ್ಳಬಹುದಾದ ಅಧ್ಯಯನಗಳ ಬಗ್ಗೆ ಹೊಳಹುಗಳನ್ನು ಕೂಡಾ ನೀಡಲಾಗಿದೆ.

ಈ ಅಧ್ಯಾಯದಿಂದ ಸ್ಫೂರ್ತಿಗೊಂಡ ಇನ್ನು ಅನೇಕ ಮುಗ್ಗುಲಗಳಲ್ಲಿ ಸಿ. ವಿ. ಕೆರಿಮನಿಯವರ ಬದುಕಿನ ಬಗೆಗೆ ಅವರ ಸಂಶೋಧನೆ ಹಾಗೂ ಒಟ್ಟಾರೆ ಅವರ ಸಾಹಿತ್ಯ ಕೃತಿಗಳ ಅಧ್ಯಯನ ಹೆಚ್ಚೆಚ್ಚು ನಡೆದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

## ೧.೩ ಅಧ್ಯಾಯನದ ವ್ಯಾಪ್ತಿ :

ಸಿ. ವಿ. ಕೆರಿಮನಿಯವರದು ಪರಿಶುದ್ಧ ಬದುಕು, ಅವರ ಮಾತು ಹೇಗೋ ನಡೆಯೂ ಹಾಗೆ, ಬದುಕಿದಂತೆ ಬರೆದರು ಬರೆದಂತೆ ನಡೆದರು. ಹೀಗಾಗಿ ಅವರ ಸಂಶೋಧನೆ ಹಾಗೂ ಅವರು ಬರೆದಿರುವ ವ್ಯಕ್ತಿಚಿತ್ರಣಗಳಲ್ಲಿ ಒಂದು ವೈಶಿಷ್ಠ್ಯವನ್ನು ಕಾಣುತ್ತೇವೆ. ಅವರ ವಿಚಾರ ಹಾಗೂ ಬರವಣಿಗೆಯಲ್ಲಿ ಎಂದೂ ಹೊಂದಾಣಿಕೆ ಮಾಡಿಕೊಂಡವರಲ್ಲ ಅನಿಸಿದ್ದನ್ನು ಇದ್ದಹಾಗೆ ಹೇಳುವ ಜಾಯಮಾನ ಸಿ. ವಿ. ಕೆರಿಮನಿಯವರದು, ಇಂಥ ವಿಭಿನ್ನ ವ್ಯಕ್ತಿತ್ವದ ಸಂಶೋಧಕ, ಚಿಂತಕ, ಸಂಘಟಕರಾಗಿ ಬೆಳೆದ ಸಿ. ವಿ. ಕೆರಿಮನಿಯವರ ಎಲ್ಲ ಕೃತಿಗಳನ್ನು ಅಧ್ಯಯನ ಮಾಡಿದ ನನಗೆ ಅವರ ಸಂಶೋಧನೆ ಹಾಗೂ ನಾಡಿನ ಪ್ರಮುಖರ ಬಗ್ಗೆ ಬರೆದ ವ್ಯಕ್ತಿಚಿತ್ರಣಗಳನ್ನು ದಾಖಲಿಸುವ ಪ್ರಯತ್ನವನ್ನು ಈ ಪ್ರಸ್ತುತ ಅಧ್ಯಯನದಲ್ಲಿ ಪ್ರಾಮಾಣಿಕವಾಗಿ ಮಾಡಿದ್ದೇನೆ.

## ೧.೪ ಅಧ್ಯಾಯನದ ಆಕರಗಳು :

ಪ್ರಸ್ತುತ ಸಿ. ವಿ. ಕೆರಿಮನಿಯವರ ಸಂಶೋಧನೆ ಹಾಗೂ ವ್ಯಕ್ತಿ ಚಿತ್ರಣಗಳು ಎನ್ನುವ ನನ್ನ ಈ ಪ್ರಬಂಧದಲ್ಲಿ, ಸಿ. ವಿ. ಕೆರಿಮನಿಯವರ ಎಲ್ಲ ಕೃತಿಗಳು ಹಾಗೂ ಅವರಿಗೆ ಅರವತ್ತು ವರ್ಷ ತುಂಬಿದ ಸಂದರ್ಭದಲ್ಲಿ ಹೊರತಂದ "ಚನ್ನ ಚೇತನ" ವೆಂಬ ಅಭಿನಂದನಾ ಗ್ರಂಥದಲ್ಲಿ ಕೆರಿಮನಿ ಪುಸ್ತಕದ ಬಗ್ಗೆ ಉತ್ತರ ಕರ್ನಾಟಕದ ಕೆಲ ಸಾಹಿತಿಗಳು ಬರೆದ ಲೇಖನಗಳು ಆಕರಗಳಾಗಿರುತ್ತವೆ. ಸಿ. ವಿ. ಕೆರಿಮನಿಯವರ ಒಡನಾಡಿಗಳು, ಸಿ. ವಿ. ಕೆರಿಮನಿಯವರ ಬಗೆಗೆ ರಚಿಸಿದ ಕವನಗಳನ್ನು ಅಲ್ಲಲ್ಲಿ ಬಳಸಿಕೊಳ್ಳಲಾಗಿದೆ. ಸಿ. ವಿ. ಕೆರಿಮನಿಯವರು ಬರೆದ ಬಿಡಿ ಲೇಖನಗಳ ಸಂಕಲನ "ಕಣಜ" ದಲ್ಲಿ "ವೀರಶೈವರ ಕಣಜ", "ಶರಣ ಕಣಜ", "ಸಾಹಿತ್ಯ ಕಣಜ", "ಕ್ಷೇತ್ರ ಕಣಜ", "ಶ್ರೇಷ್ಠರ ಕಣಜ" ಎಂಬ ಉಪಘಟಕಗಳಲ್ಲಿ ಉತ್ತಮವಾದ ಸಂಶೋಧನಾ ಲೇಖನಗಳು ಪ್ರಕಟಗೊಂಡಿವೆ. ಅವುಗಳು ಈ ಅಧ್ಯನಯಕ್ಕೆ ಪೂರಕ ಆಕರಗಳಾಗಿರುತ್ತವೆ.

ಸಿ. ವಿ. ಕೆರಿಮನಿಯವರ ಒಡನಾಡಿಗಳು, ಸಮೀಪವರ್ತಿಗಳು ಸಿ. ವಿ. ಕೆರಿಮನಿಯವರ ಬಗೆಗೆ ಬರೆದ, ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಇಲ್ಲಿ ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಪೂರ್ಣಪ್ರಮಾಣದ ಸಂಶೋಧಕರಲ್ಲದಿದ್ದರೂ ಪುಲಗೆರಿಯ ಪರಿಸರದಲ್ಲಿ ಶ್ರೀಯುತರು ಕೈಗೊಂಡ ಕೆಲವು ಸಂಶೋಧನೆಗಳು ಹಾಗೂ ನಾಡಿನ ಶ್ರೇಷ್ಠ ವ್ಯಕ್ತಿಗಳ ಬಗೆಗೆ ಅವರು ಕೈಗೊಂಡ ಅಧ್ಯಯನವನ್ನೆಲ್ಲಾ ವಿಮರ್ಶಾವಲೋಕನ ಮಾಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

# ಅಧ್ಯಾಯ – ೨ :
# ಸಿ. ವಿ. ಕೆರಿಮನಿಯವರ ಬದುಕು ಹಾಗೂ ಸಾಹಿತ್ಯದ ಸ್ಥೂಲ ನೋಟ

## ೨.೧ ಬಾಲ್ಯ ಜೀವನ, ವಿದ್ಯಾಭ್ಯಾಸ, ಕೌಟುಂಬಿಕ ಪರಿಸರ, ವೈವಾಹಿಕ ಜೀವನ :

ಸಾಹಿತ್ಯ ಅಭಿಮಾನಿಗಳಿಗೆ ಕೃತಿಯೊಂದಿಗೆ ಕೃತಿಕಾರನ ಬಗ್ಗೆ ತಿಳಿಯಬೇಕೆಂಬ ಕುತೂಹಲ ಇರುವುದು ಸಹಜ. ಕವಿರಾಜ ಮಾರ್ಗದ ಕಾಲಕ್ಕೆ ಪುಲಗೆರೆ ಅಂದರೆ ಈಗಿನ ಲಕ್ಷ್ಮೇಶ್ವರ ತಿರುಳಗನ್ನಡ ಬೀಡಾಗಿತ್ತು. ಅಂತಹ ಪರಿಸರದಲ್ಲಿ ವೃತ್ತಿಜೀವನ ಆರಂಭಿಸಿದ ಸಿ. ವಿ. ಕೆರಿಮನಿಯವರು ತಮ್ಮ ಜೀವನದುದ್ದಕ್ಕೂ ಕನ್ನಡ ಭಾಷೆ, ಸಾಹಿತ್ಯ, ಸಂಶೋಧನೆ ಎನ್ನುವ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಅವರ ಉತ್ಸಾಹ ಇನ್ನೂ ಕುಂದಿಲ್ಲ ಎನ್ನುವುದಕ್ಕೆ ಅವರ ಕ್ರೀಯಾಶೀಲತೆ ಹಾಗೂ ಸೃಜನಶೀಲತೆಯೇ ಕಾರಣ.

ಸಿ. ವಿ. ಕೆರಿಮನಿಯವರು ದಿನಾಂಕ ೨೯–೦೪–೧೯೪೧ ರಲ್ಲಿ ಪ್ರಶಸ್ತವಾದ ಬಸವ ಜಯಂತಿಯ ದಿನ ಮೊರಬ ಗ್ರಾಮ ಮೂಲ ಸ್ಥಳವಾದರೂ ತಾಯಿಯ ತವರುಮನೆ ನವಲಗುಂದದ ತಾಲೂಕಿನ ಬೆಳವಟಿಗೆಯಲ್ಲಿ ಜನಿಸಿದರು. ತಂದೆ ವಿರೂಪಾಕ್ಷಪ್ಪ ತಾಯಿ ರುದ್ರಮ್ಮ ಇವರ ಪೂರ್ಣ ಹೆಸರು ಚೆನ್ನಪ್ಪ ವಿರೂಪಾಕ್ಷಪ್ಪ ಕೆರಿಮನಿ. ಸಿ. ವಿ. ಕೆರಿಮನಿಯವರ ಮನೆತನ ಮೂಲತಃ ಕೃಷಿ ಪ್ರಧಾನ ಕುಟುಂಬ. ನವಲಗುಂದ ತಾಲೂಕಿನ ಬೆಳವಟಿಗೆ ಗ್ರಾಮದಲ್ಲಿ ಸಂಪ್ರದಾಯಸ್ಥ ಕೃಷಿ ಕುಟುಂಬದ ಹಿನ್ನಲೆಯಿಂದ ಜನಪದ ಸಾಹಿತ್ಯದ ಪ್ರಭಾವ ಸಿ. ವಿ. ಕೆರಿಮನಿಯವರ ಮೇಲೆ ಆಗಿದೆ. ತಾಯಿ ರುದ್ರಮ್ಮ ಮಕ್ಕಳಿಗೆ ಒಳ್ಳೆಯ ಸಂಸ್ಕಾರ ನೀಡುವ ಕಾಯಕ ಪ್ರವೃತ್ತಿಯವರಾಗಿದ್ದರು. ತಮ್ಮ ಮಗ ಕಲಿತು ಸಂಸ್ಕಾರವಂತವನಾಗಿ ಯಾವುದಾದರೂ ಸರಕಾರಿ ಉದ್ಯೋಗ ಮಾಡಬೇಕೆಂಬ ಹಂಬಲ ಇದ್ದರೂ, ಪರಂಪರಾಗತ ಮನೆಕೆಲಸ ಕೃಷಿ ಚಟುವಟಿಕೆಗಳನ್ನು ಕೈಕೊಂಡರೆ ಸಾಕು ಎನ್ನುವ ಮನೋಭಾವದವರಾಗಿದ್ದರು.

ತಾಯಿಯ ತವರುಮನೆ ಬೆಳವಟಿಗೆಯಲ್ಲಿ ತಮ್ಮ ಹೆಚ್ಚಿನ ಬಾಲ್ಯ ಜೀವನವನ್ನು ಕಳೆದಿದ್ದಾರೆ. ಈಗಿನ ಹಾಗೆ ಯಾವುದೇ ಮನರಂಜನೆಯ ಮಾಧ್ಯಮಗಳು ಆಗ ಇರಲಿಲ್ಲ. ಬಿಡುವಿನ ಸಮಯದಲ್ಲಿ ಗೋಲಿಗುಂಡು, ಚಿಣಿಪಣಿ, ಲಗೋರಿ ಆಟಗಳಲ್ಲಿ ಇವರಿಗೆ ವಿಶೇಷ ಆಸಕ್ತಿ. ಕೆರಿಮನಿಯವರ ತಾಯಿ ರುದ್ರಮ್ಮ ಜನಪದ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಅವುಗಳ ಪ್ರಭಾವ

ಸಿ. ವಿ. ಕೆರಿಮನಿಯವರ ಮೇಲೆ ಆಗಿದೆ. ನನ್ನ ಈವತ್ತಿನ ಸಾಧನೆಯ ಹಿಂದೆ ನನ್ನ ತಾಯಿ ಹಾಡುವ ಆ ಜನಪದ ಹಾಡುಗಳ ಪ್ರಭಾವವಿದೆ ಎಂದು ಸಿ. ವಿ. ಕೆರಿಮನಿಯವರು ಹಲವಾರು ಸಾರಿ ನೆನಪಿಸಿಕೊಳ್ಳುತ್ತಾರೆ.

**ಮಾತಾಡು ಮಾತಾಡು ಲಿಂಗವೇ**

**----------------------------**

**ನೀರು ಕಾಯ್ದವ ಜಳಕಕ್ಕೆ ಹಾಲು**

**ಕಾಯ್ದವ ಕುಡಿಲಾಕ.........**

ಎಂಬ ಉಳವಿಯ ಬಸವಣ್ಣನ ಮೇಲಿನ ಹಾಡುಗಳನ್ನು ಸಂಗ್ರಹಿಸಿ ಪ್ರಪ್ರಥಮವಾಗಿ 'ವಿಶ್ವಬಂಧು ಪತ್ರಿಕೆಯಲ್ಲಿ ಪ್ರಕಟಿಸಿದರು.

## ವಿದ್ಯಾಭ್ಯಾಸ :

ಸಿ. ವಿ. ಕೆರಿಮನಿಯವರ ಪ್ರಾಥಮಿಕ ವಿದ್ಯಾಭ್ಯಾಸ ಅವರ ತಾಯಿಯ ತವರೂರು ನವಲಗುಂದ ತಾಲೂಕಿನ ಮೊರಬ ಗ್ರಾಮದಲ್ಲಿ ಪ್ರಾರಂಭವಾಯಿತು. ಒಂದನೆಯ ತರಗತಿಯಿಂದ ಏಳನೆಯ ತರಗತಿಯವರೆಗೆ ಕಲಿಯುವಾಗ ಕಲಿಕೆಯಲ್ಲಿ ಆಸಕ್ತಿ ಮತ್ತು ಅಭಿರುಚಿಯೊಂದಿಗೆ ಗುರುಗಳ ಮಾರ್ಗದರ್ಶನದಲ್ಲಿ ಪರಿಣಾಮಕಾರಿಯಾಗಿ ಅಭ್ಯಾಸ ಮಾಡಿದರು. ಆಗಲೇ ಸಿ. ವಿ. ಕೆರಿಮನಿಯವರು ಜನಪದ ಸಾಹಿತ್ಯದ ಕಡೆಗೆ ಆಕರ್ಷಿತರಾದರು. ಸಿ. ವಿ. ಕೆರಿಮನಿಯವರ ತಾಯಿ ಒಳ್ಳೆಯ ಜನಪದ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಪ್ರತ್ಯಕ್ಷವಾಗಿ ಆ ಹಾಡುಗಳು ಸಿ. ವಿ. ಕೆರಿಮನಿಯವರು ಸಾಹಿತ್ಯದ ಕಡೆಗೆ ಮನಸ್ಸು ಒಲಿಯಲು ಸಹಾಯಕವಾಯಿತು. ಮಾವನ ಮನೆಯಲ್ಲಿದ್ದುಕೊಂಡು ಮುಲ್ಕಿ ಪರೀಕ್ಷೆಯನ್ನು ೧೯೫೫ ರಲ್ಲಿ ಉನ್ನತ ದರ್ಜೆಯಲ್ಲಿ ತೇರ್ಗಡೆ ಹೊಂದಿದರು.

ಪ್ರಾಥಮಿಕ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವಾಗ ದಿ. ಎಸ್. ಜಿ. ಸುಬೇದಾರ ಅವರು ಇವರ ಗುರುಗಳಾಗಿದ್ದರು. ಅವರ ಶಿಸ್ತು, ಸಮಯ ಪಾಲನೆಯನ್ನು ಇಂದಿಗೂ ಸಿ. ವಿ. ಕೆರಿಮನಿಯವರು ಅನುಸರಿಸುತ್ತಾರೆ ಹಾಗೂ ಸ್ಮರಿಸುತ್ತಾರೆ. ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವಾಗ ಕೇವಲ ಅಭ್ಯಾಸ, ಆಟ, ಪಾಠವನ್ನದೆ ಬಿಡುವಿನ ಸಮಯದಲ್ಲಿ ಮನೆಗೆಲಸದಲ್ಲಿ ನೆರವಾಗುವುದು ನಿತ್ಯದ ರೂಢಿಯಾಗಿತ್ತು. ಈಗಿನಂತೆ ಮನರಂಜನಾ ಮಾಧ್ಯಮಗಳು ಇಲ್ಲದ ಆ ಕಾಲದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ನಡೆಯುವ ಆಟಗಳಲ್ಲಿ ಸಿ. ವಿ. ಕೆರಿಮನಿಯವರಿಗೆ ವಿಶೇಷ ಆಸಕ್ತಿ ಇತ್ತು. ದೊಡ್ಡಾಟ, ಸಣ್ಣಾಟ, ಪಾರಿಜಾತ, ತೊಗಲುಗೊಂಬೆಯಾಟಗಳನ್ನು ಕಣ್ಣಿನಲ್ಲಿ ಕಣ್ಣಿಟ್ಟು ಗಹನವಾಗಿ ನೋಡುವುದು ಸಿ. ವಿ. ಕೆರಿಮನಿಯವರ ಹವ್ಯಾಸವಾಗಿತ್ತು.

ಮುಲ್ಕಿ ಪರೀಕ್ಷೆ ಪಾಸಾದ ನಂತರ ಸಿ. ವಿ. ಕೆರಿಮನಿಯವರು ಅದೇ ತಾನೆ ಮೊರಬದಲ್ಲಿ ಆರಂಭವಾದ ಪ್ರೌಢ ಶಾಲೆಗೆ ಸೇರಬೇಕೆನ್ನುವಾಗ ಮನೆಯವರು ವಿರೋಧಿಸಿದರು. ಮನೆಯ ಮೂಲ ಉದ್ಯೋಗ ವ್ಯವಸಾಯವನ್ನು ಮಾಡುತ್ತಾ ಹೋಗು ಎಂದಾಗ ಅದನ್ನು ಧಿಕ್ಕರಿಸಿ ಧಾರವಾಡದಲ್ಲಿರುವ ತಮ್ಮ ಮಾವನ ಮನೆಗೆ ಹೈಸ್ಕೂಲ ಶಿಕ್ಷಣ ಪಡೆಯಲು ಹೋದರು. ಧಾರವಾಡದಲ್ಲಿರುವ ಪ್ರತಿಷ್ಠಿತ ಆರ್. ಎಲ್. ಎಸ್. ಹೈಸ್ಕೂಲದಲ್ಲಿ ೮ನೆಯ ತರಗತಿಯಿಂದ ೧೦ನೆಯ ತರಗತಿಯವರೆಗೆ ಅಭ್ಯಾಸ ಮಾಡಿದರು.

ಧಾರವಾಡ ಕರ್ನಾಟಕದ ಸಾಂಸ್ಕೃತಿಕ ನಗರ. ತುಂಬ ಜನ ಸಾಹಿತಿಗಳು ವಾಸ ಮಾಡುವ ಈ ನಗರದಲ್ಲಿ ಸಿ. ವಿ. ಕೆರಿಮನಿಯವರ ಮೇಲೆ ಪ್ರಭಾವ ಬೀರಿದ ಸಾಹಿತಿಗಳು ಅನೇಕ. ಎಸ್. ಆರ್. ಗುಂಜಾಳ, ದಿ. ಶ್ರೀ. ವೀ. ರು. ಕೊಪ್ಪಳ, ದಿ. ಶ್ರೀ. ಸಿದ್ಧಣ್ಣ ಮಸಳಿ ಮುಂತಾದವರು ಆರ್. ಎಲ್. ಎಸ್. ಹೈಸೂಲಿನಲ್ಲಿ ಶಿಕ್ಷಕರಾಗಿದ್ದರು. ಕನ್ನಡ ಭಾಷೆ ಹಾಗೂ ಸಾಹಿತ್ಯದಲ್ಲಿ ವಿಶೇಷ ಪರಿಣಿತಿ ಪಡೆದ ಶಿಕ್ಷಕರ ಮಾರ್ಗದರ್ಶನದಲ್ಲಿ ಕಲಿತ ಸಿ. ವಿ. ಕೆರಿಮನಿಯವರು ಓದಿದರೆ ಕನ್ನಡ ವಿಷಯವನ್ನೇ ಅಧ್ಯಯನ ಮಾಡಬೇಕೆಂದು ಅಂದುಕೊಂಡಿದ್ದರು. ಅದನ್ನು ಸಾಧಿಸಿದರು. ಕನ್ನಡ ವಿಷಯದಲ್ಲಿ ಅತೀ ಹೆಚ್ಚು ಅಂಕ ಪಡೆಯುವದರೊಂದಿಗೆ ೧೯೫೯ ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ತೇರ್ಗಡೆ ಹೊಂದಿದರು.

೧೯೫೯ ರಲ್ಲಿ ಕರ್ನಾಟಕ ಕಾಲೇಜು ಧಾರವಾಡದಲ್ಲಿ ಎಫ್.ವೈ (FY) ಮತ್ತು ಬಿ.ಎ. ಭಾಗ-೧ ಎರಡು ವರ್ಷ ಅಧ್ಯಯನ ಮಾಡುವಾಗ ಕನ್ನಡದ ಹೆಸರಾಂತ ವಿದ್ವಾಂಸರಾದ ದಿ. ಡಾ. ಸ. ಸ. ಮಾಳವಾಡರ ಪ್ರಭಾವ ಸಿ. ವಿ. ಕೆರಿಮನಿಯವರ ಮೇಲಾಯಿತು. ಆದರೆ ಕಾರಣಾಂತರದಿಂದ ಸಿ. ವಿ. ಕೆರಿಮನಿಯವರು ೧೯೬೧ ರಲ್ಲಿ ಜೆ. ಎಸ್. ಎಸ್. ಕಾಲೇಜಿನಲ್ಲಿ ಪ್ರವೇಶ ಪಡೆದುಕೊಳ್ಳುವ ಪ್ರಸಂಗ ಬಂದಿತು. ಧಾರವಾಡದ ಹೊಸ ಯಲ್ಲಾಪೂರದ ನೇಕಾರ ಸಹಕಾರ ಸಂಘದಲ್ಲಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಾ (Earning and Learning) 'ಗಳಿಸುತ್ತಾ ಕಲಿ' ಎನ್ನುವ ಅರ್ಥದಲ್ಲಿ ಸಿ. ವಿ. ಕೆರಿಮನಿಯವರು ವಿದ್ಯಾಭ್ಯಾಸವನ್ನು ಮುಂದುವರೆಸಿದರು. ಆ ಸಂದರ್ಭದಲ್ಲಿ ಡಾ. ಆಯ್. ವಾಯ್. ಧಾರವಾಡಕರ ಅವರ ಶಿಸ್ತುಬದ್ಧ ಜೀವನ ಹಾಗೂ ಅವರ ಸಾಹಿತ್ಯದ ಪ್ರಭಾವ ಸಹಜವಾಗಿ ಇವರ ಮೇಲೆ ಆಗಿದೆ. ೧೯೬೪ ರಲ್ಲಿ ಜೆ. ಎಸ್. ಎಸ್. ಪದವಿ ಮಹಾವಿದ್ಯಾಲಯದಿಂದ ಪದವಿಯನ್ನು ಪಡೆದುಕೊಂಡ ನಂತರ ೧೯೬೪-೬೬ ರವರೆಗೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಷಯವನ್ನು ಆಯ್ದುಕೊಂಡು ಅಧ್ಯಯನವನ್ನು ಕೈಕೊಂಡರು. ಆಗ ಮನೆತನದ ಅನೇಕ ಸಮಸ್ಯೆಗಳಿಂದ ಅಧ್ಯಯನಕ್ಕೆ ತೊಂದರೆಯಾದರೂ ಛಲದಿಂದ ಅಧ್ಯಯನವನ್ನು ಮುಂದುವರಿಸಿದರು. ಡಾ. ಆರ್. ಸಿ. ಹಿರೇಮಠ, ಡಾ. ಬಿ. ಎನ್. ಕುಲಕುರ್ಣಿಯವರ ನೆಚ್ಚಿನ ಶಿಷ್ಯರಾಗಿ ಅವರ ಮಾರ್ಗದರ್ಶನ, ಪ್ರೋತ್ಸಾಹದಿಂದ ಕನ್ನಡ ಸ್ನಾತಕೋತ್ತರ ಎಂ.ಎ.ಯನ್ನು ಪಾಸು ಮಾಡಿದರು.

ಸ್ನಾತಕೋತ್ತರ ತರಗತಿಯಲ್ಲಿ ಅಧ್ಯಯನ ಮಾಡುವಾಗಲೇ ವಿಶ್ವವಿದ್ಯಾಲಯದ ವಾರ್ಷಿಕ ಪತ್ರಿಕೆಯಲ್ಲಿ 'ನಾನಾರು'ವೆಂಬ ಧಾರವಾಡವನ್ನು ಕುರಿತು ಸಿ. ವಿ. ಕೆರಿಮನಿಯವರ ಲೇಖನ ಪ್ರಕಟವಾಗಿತ್ತು. ಅಂದು ಪ್ರಾರಂಭವಾದ ಅವರ ಬರವಣಿಗೆ ಇಂದಿಗೂ ಓತಪ್ರೋತವಾಗಿ ಮುಂದುವರೆದುಕೊಂಡು ಬಂದಿದೆ.

## ಕೌಟುಂಬಿಕ ಪರಿಸರ :

ಸಿ. ವಿ. ಕೆರಿಮನಿಯುವರ ಮನೆತನ ಮೂಲತಃ ಕೃಷಿ ಪ್ರಧಾನ ಕುಟುಂಬ. ತಂದೆ-ತಾಯಿಯರು ಅಷ್ಟೇನು ಓದಿದವರಲ್ಲ. ಪ್ರಾಥಮಿಕ ಶಿಕ್ಷಣಕ್ಕೆ ಅವರ ವಿದ್ಯಾಭ್ಯಾಸ ಕೊನೆಗೊಂಡಿತ್ತು. ಆದರೆ ಸಿ. ವಿ. ಕೆರಿಮನಿಯವರ ಸೋದರ ಮಾವನವರು ಮಾತ್ರ ಆಗಿನ ಕಾಲದಲ್ಲಿ ಕೊಲ್ಲಾಪೂರ ರಾಜಾರಾಮ ಕಾಲೇಜಿನಿಂದ ಬಿ.ಎ. ಪದವಿ ಪಡೆದಿದ್ದರು. ಮೊರಬ ಗ್ರಾಮಕ್ಕೆ ಅವರು ಮೊದಲ ಪದವಿ ಪಡೆದವರಾಗಿದ್ದರು. ಊರಿನಲ್ಲಿ ವಿದ್ಯಾವಂತರೆಂದರೆ ಬಹುತೇಕರು ಎಸ್.ಎಸ್.ಎಲ್.ಸಿ. ಪಾಸಾದವರಾಗಿದ್ದರು. ವೃತ್ತಿಯಿಂದ ರೈತರಾದರೂ ಪ್ರವೃತ್ತಿಯಿಂದ ಸುಖ ಸಂಸಾರಿಗಳಾಗಿದ್ದರು.

ಈಗಿನಂತೆ ಆ ಕಾಲಕ್ಕೆ ಟಿ.ವ್ಹಿ.ಗಳಾಗಲಿ, ಪತ್ರಿಕೆಗಳಾಗಲಿ ಇರಲಿಲ್ಲ. ಆದರೆ ಹಳ್ಳಿಯ ಜನರು ಮನರಂಜನೆಗಾಗಿ ಮೋಜು, ಮಜಲು, ಭಜನೆ, ಕರಡಿ ಮಜಲು, ಡೊಳ್ಳಿನ ಹಾಡು, ಕುಟ್ಟುವ ಬೀಸುವ ಹಾಡು, ಸುಗ್ಗಿಯ ಹಾಡು, ಮೊಹರಂ ರಿವಾಯತು, ಹಂತಿ ಹಾಡು, ಗುಜಗಿ ಹಾಡುಗಳನ್ನು ಹಾಡುತ್ತಿದ್ದರು. ಸಿ. ವಿ. ಕೆರಿಮನಿಯವರ ತಾಯಿ ಬೀಸುವಾಗ, ಕುಟ್ಟುವಾಗ ಪದಗಳನ್ನು ರಾಗವೆತ್ತಿ ಧ್ವನಿಪೂರ್ಣವಾಗಿ ಹಾಡುತ್ತಿದ್ದರು. ಸಾಹಿತ್ಯ ಅಧ್ಯಯನ ಹಾಗೂ ಸಾಹಿತ್ಯ ರಚನೆಯ ಕಾರ್ಯಕ್ಕೆ ತಾಯಿಯ ಸಾಕಷ್ಟು ಪ್ರಭಾವ ಸಿ. ವಿ. ಕೆರಿಮನಿಯವರ ಮೇಲೆ ಬೀರಿದೆ.

**"ಏನಾದರೂ ಮಾಡು । ಕೈಗೆ ದೊರತುಜ್ಜಗನ**
**ನಾನೇನು ಹುಲ್ಲುಕಡ್ಡಿ । ಎಂಬ ನುಡಿಬೇಡ**
**ಹೀನಮಾವುದಿಲ್ಲ । ಜಗದಗುಡಿ ಊಳಿಗದಿ**
**ತಾನ ನಿನಗಿಹುದಿಲ್ಲಿ । ಮಂಕುತಿಮ್ಮ..........."**

ಎಂಬ ಡಿ.ವ್ಹಿ.ಜಿ.ಯವರ ವಾಣಿ ಸಿ. ವಿ. ಕೆರಿಮನಿಯವರು ತಮ್ಮ ತಾಯಿಯವರನ್ನು ನೆನೆದಾಗೊಮ್ಮೆ ಅವರಿಗೆ ನೆನಪಿಗೆ ಬರುತ್ತದೆ.

## ವೈವಾಹಿಕ ಜೀವನ :

ಸಿ. ವಿ. ಕೆರಿಮನಿಯುವರ ಸೋದರ ಮಾವನವರಾದ ಶ್ರೀ ಬಸಪ್ಪ ಮಲ್ಲಪ್ಪ ಗುಡಗೇರಿಯವರು ಮಗಳು ಲಲಿತಾ ಜೊತೆ ೧೯೬೯ ರ ಏಪ್ರೀಲ್ ೨೭ ರಂದು ಬಸವ ಜಯಂತಿಯ

ದಿನದಂದು ಮದುವೆ ಆಯಿತು. ಇವರ ವಿವಾಹ ಸಮಾರಂಭಕ್ಕೆ ಪೂಜ್ಯವಾದ ಶ್ರೀ. ಮದ್ ರಂಭಪೂರಿ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಪ್ರಸನ್‌ರೇಣುಕ ಲಿಂಗೈಕ್ಯ ವೀರ ಗಂಗಾಧರ ಶಿವಾಚಾರ್ಯರು ಸಾನಿಧ್ಯವಹಿಸಿ ನವ ವಧು-ವರರನ್ನು ಆಶೀರ್ವದಿಸಿದರು. ಸಾವಿರಾರು ಹಿತೈಸಿಗಳು, ಬಂಧುಗಳು, ಮಿತ್ರರು ಆಗಮಿಸಿ ಇವರಿಗೆ ಶುಭಕೋರಿದರು.

ಸ್ವತಃ ಗಾಯಕಿಯಾದ, ಸಾಹಿತಿಯಾದ ಶ್ರೀಮತಿ ಲಲಿತಕ್ಕ ಗುಡಗೇರಿಯವರು ಹಾಲಿಗೆ ಜೇನು ಬೆರೆತಂತೆ ಸಿ. ವಿ. ಕೆರಿಮನಿಯವರೊಂದಿಗೆ ಬೆರೆತು ಹೋದರು.

**"ನಿನ್ನ ಕಂಡ ಚಣದೊಳೆನ್ನ**
**ಕಂಗಳ ಬರ ಹಿಂಗಿತು**
**ನೂರು ನೋವನ್ನೆಲ್ಲ ಮರೆಸಿ**
**ಸ್ವರ್ಗ ಹೂವ ಸುರಿಸಿತು.**
**ಸುಳಿವ ಗಾಳಿ ಅಳಿಯದಂಥ**
**ಪ್ರೀತಿ ಗಂಧ ತಂದಿತು...................."**

ಎನ್ನುವ ಚನ್ನವೀರ ಕಣವಿಯವರ ಕವಿವಾಣಿಯಂತೆ ಬಾಳಿಗೆ ಪರಮ ಪ್ರೀತಿಯ ಆಧಾರ ಎಂದು ತಿಳಿದ ಆಧಾರ ಜೀವಿ 'ಛಲ' ದಂಪತಿಗಳಿಗೆ ವಿಜೂ, ಜಯಾ, ಸೋಮು, ಸಂಪದಾ ನಾಲ್ವರು ಮಕ್ಕಳಾದರು.

ಸಿ. ವಿ. ಕೆರಿಮನಿಯವರು ನಿಜವಾಗಿ ಭಾಗ್ಯವಂತರು. ಅವರು ಭಾಗ್ಯವಂತರಾಗಿರುವುದು ನೌಕರಿಯಿಂದಲ್ಲ. ಅವರು ಪಡೆದಿರುವ ಅಮುಳ್(ಳ) (ಅವಳಿ-ಜವಳಿ) ವನಿತೆಯರಿಂದ. ಒಬ್ಬರು ಸರಸ್ವತಿ ವನಿತೆ ಮತ್ತೊಬ್ಬರು ಲಲಿತಾ ವನಿತೆ, ಅವರಿಬ್ಬರಲ್ಲಿ ಸವತಿ ಮತ್ಸರವಿಲ್ಲ. (ಅಂಗಿಯ ಮೇಲೆ ಅಂಗಿ, ಚಂದೇನ ನನರಾಯ, ರಂಭಿಯ ಮೇಲೆ ರಂಭಿ ಚಂದೇನ ಭಾವವಿಲ್ಲ). ಇಬ್ಬರೂ ಸ್ಫೂರ್ತಿ ದಾಯಿಗಳಾಗಿ ಸಿ. ವಿ. ಕೆರಿಮನಿಯವರ ಬಾಳು ಬೆಳಗಿದ್ಯಾರೆ.[೧] ನೋಡಿದವರು ನಾಚುವಂತೆ ಸಾಹಿತಿ ದಂಪತಿಗಳು ಇವರಾಗಿ ಕಲಾದೇವಿಯ ಆರಾಧನೆಯನ್ನು ಅನೂಚಾನವಾಗಿ ನಡೆಸುತ್ತಾ ಬಂದಿದ್ದಾರೆ.

## ೨.೨ ವೃತ್ತಿ ಜೀವನ :

ಸಿ. ವಿ. ಕೆರಿಮನಿಯವರು ಜಿ.ಎಸ್.ಎಸ್. ಪದವಿ ಮಹಾವಿದ್ಯಾಲಯದಲ್ಲಿ ಓದುತ್ತಿರುವಾಗಲೇ (Earning and Learning) ತತ್ವಕ್ಕೆ ಬದ್ಧರಾಗಿದ್ದರು. ಧಾರವಾಡದ ಹೊಸ

೧. ಡಾ. ರಾಜಶೇಖರ ಇಚ್ಚಂಗಿ : ಕಲಾದೇವಿಯ ಕುಡಿಗಳು (ಕಣ್ಣುಗಳ) ಚನ್ನಚೇತನ :

ಯಲ್ಲಾಪೂರದ ನೇಕಾರ ಸಹಕಾರ ಸಂಘದಲ್ಲಿ ಕಾರ್ಯದರ್ಶಿಯಾಗಿ ಸೇವೆ ಪ್ರಾರಂಭಿಸಿದರು. ಆದರೆ ಆ ವೃತ್ತಿ ತಾತ್ಕಾಲಿಕವಾಗಿತ್ತು. ಸನ್ ೧೯೬೬ ರಲ್ಲಿ ಸ್ನಾತಕೋತ್ತರ ಎಂ.ಎ. ಪದವಿ ಪಡೆದುಕೊಂಡ ನಂತರ ನರಗುಂದದ ಪುರಸಭೆಯ ಹೈಸ್ಕೂಲನಲ್ಲಿ ಆಗಸ್ಟ್ ೧, ೧೯೬೬ ರಿಂದ ಒಂದು ವರ್ಷ ಅಂದರೆ ಜೂನ್ ೧೯, ೧೯೬೭ ರವರೆಗೆ ಸಹ ಶಿಕ್ಷಕರಾಗಿ ಕಾರ್ಯನಿರ್ವಹಿಸಿದ್ದಾರೆ. ಆ ಸಂದರ್ಭದಲ್ಲಿ ಎಲ್ಲ ಶಿಕ್ಷಕರು ಕೂಡಿಕೊಂಡು 'ಪುತ್ಥಳಿ' ಎಂಬ ನಾಟಕವನ್ನಾಡಿದ್ದನ್ನು ಸಿ. ವಿ. ಕೆರಿಮನಿಯವರು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ.

ಐತಿಹಾಸಿಕ ಹಾಗೂ ಸಾಂಸ್ಕೃತಿಕವಾಗಿ ತನ್ನದೇ ಆದ ಭವ್ಯ ಪರಂಪರೆಯನ್ನು ಹೊಂದಿದ ಪುಲಗೆರೆ ಮುನ್ನೂರ ಖ್ಯಾತಿಯ ಗದಗ ಜಿಲ್ಲೆಯ ಲಕ್ಷ್ಮೇಶ್ವರದ ಪುರಸಭೆಯ ಕಲಾ ಮತ್ತು ವಾಣಿಜ್ಯ ಪದವಿ ಮಹಾವಿದ್ಯಾಲಯದಲ್ಲಿ ೧೯೬೭ ರಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆ ಆರಂಭಿಸಿದ ಸಿ. ವಿ. ಕೆರಿಮನಿಯವರು ಕ್ರಿಯಾಶೀಲರು. ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಶಿಕ್ಷಕರಾಗಿದ್ದರು. ವಿದ್ಯಾರ್ಥಿಗಳಲ್ಲಿ ಹುದುಗಿದ ಪ್ರತಿಭೆಯನ್ನು ಬೆಳಕಿಗೆ ತರುವ ನಿಟ್ಟಿನಲ್ಲಿ 'ಪುಲಿಗೆರೆ ಪ್ರಭೆ'ಯ ಪ್ರಧಾನ ಸಂಪಾದಕರಾಗಿ (೧೯೬೮), ಕರ್ನಾಟಕ ಸಂಘ (೧೯೬೯) ಹುಟ್ಟು ಹಾಕುವುದರ ಮೂಲಕ ರಚನಾತ್ಮಕ ಕಾರ್ಯಕ್ರಮಗಳನ್ನು ಸಂಘಟಿಸಿದರು.

ಸಿ. ವಿ. ಕೆರಿಮನಿಯವರು ಕರ್ನಾಟಕ ವಿಶ್ವವಿದ್ಯಾಲಯ ಕಾಲೇಜು ಶಿಕ್ಷಕ ಸಂಘದ ಉಪಾಧ್ಯಕ್ಷರಾಗಿ, ಕರ್ನಾಟಕ ವಿಶ್ವವಿದ್ಯಾಲಯ ಅಕ್ಯಾಡಮಿಕ್ ಕೌನ್ಸಿಲ್ ಸದಸ್ಯರಾಗಿ, ಕರ್ನಾಟಕ ವಿಶ್ವವಿದ್ಯಾಲಯ ಅಭ್ಯಾಸ ಮಂಡಳಿಯ ಪದವಿ ಪರೀಕ್ಷೆಗಳ ಚೇರಮನ್‌ರಾಗಿ ಕಾರ್ಯನಿರ್ವಹಿಸಿದ್ದಾರೆ. ೧೯೯೯ ರಲ್ಲಿ ಮಹಾವಿದ್ಯಾಲಯದ ಪ್ರಾಚಾರ್ಯರಾಗಿ ನಿವೃತ್ತಿ ಹೊಂದಿದ ಸಿ. ವಿ. ಕೆರಿಮನಿಯವರು ಮೂರು ದಶಕಗಳಿಂದ ಹೆಚ್ಚು ಕಾಲ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ಶಿಕ್ಷಣ ರಂಗಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆ ನೀಡಿದ್ದಾರೆ.

ಸಿ. ವಿ. ಕೆರಿಮನಿಯವರು ಉಪನ್ಯಾಸ ವೃತ್ತಿಯೊಂದಿಗೆ ಸಾಹಿತ್ಯಿಕ ಹಾಗೂ ಸಂಘಟನಾ ಅಭಿರುಚಿವುಳ್ಳವರಾಗಿದ್ದಾರೆ. ಅಂತೆಯೇ ಹಲವಾರು ಸಂಘ ಸಂಸ್ಥೆಗಳೊಂದಿಗೆ ತಮ್ಮನ್ನು ತೊಡಗಿಸಿಕೊಂಡು ತಮ್ಮದೇ ಆದ ನಾಡು ನುಡಿ ಸೇವೆ ಗೈದಿದ್ದಾರೆ.

## ೨.೩ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ಕೊಡುಗೆ :

ಡಾ. ಎಚ್. ತಿಪ್ಪೆರುದ್ರಸ್ವಾಮಿಯವರ 'ಕದಳಿ ಕರ್ಪೂರ', ಮಹಾಕವಿ ಪಂಪನ 'ವಿಕ್ರಮಾರ್ಜುನ ವಿಜಯ', ರನ್ನನ 'ಗದಾಯುದ್ಧ', ಪೊನ್ನನ 'ಶಾಂತಿನಾಥ ಪುರಾಣ', ಕುಮಾರವ್ಯಾಸನ 'ಗದುಗಿನ ಭಾರತ', ಚಾಮರಸನ 'ಪ್ರಭುಲಿಂಗಲೀಲೆ', ಸರ್ವಜ್ಞನ 'ತ್ರಿಪದಿಗಳು' ಕುರಿತು ವಿಚಾರ ಸಂಕೀರಣಗಳನ್ನು ಏರ್ಪಡಿಸಿ ಯಶಸ್ವಿಗೊಳಿಸಿದ್ದಾರೆ. ೧೯೮೩ರಲ್ಲಿ ಜಾನಪದ ವಿದ್ವಾಂಸ ಡಾ. ಬಿ. ಬಿ. ಹೆಂಡಿ ಅಧ್ಯಕ್ಷತೆಯಲ್ಲಿ

ಕ.ವಿ.ವಿ. ವತಿಯಿಂದ ೧೧ನೇ ಅಖಿಲ ಕರ್ನಾಟಕ ಜಾನಪದ ಸಮ್ಮೇಳನ ಯಶಸ್ವಿಯಾಗಿ ಸಂಘಟಿಸಿದ್ದಾರೆ. 'ಪಂಪ ಪ್ರಕಾಶನ' ಮೂಲಕ 'ಪುಲಿಗೆರೆ', 'ವೀರಶೈವ ಸಾಹಿತ್ಯ ಸಮೀಕ್ಷೆ' ಗ್ರಂಥಗಳ ಸಂಪಾದಕರಾಗಿ ಅಲ್ಲದೇ ಭಾರತೀಯ ಹಬ್ಬಗಳು, ಷಡಕ್ಷರದೇವ, ಮೈಲಾರ ಮಹಾದೇವ ವಿಷ್ಣುಶಾಸ್ತ್ರೀ ಚಿಪಳೂಣಕರ, ನದಿಗಳು, ನಮ್ಮವರ ಬದುಕು (ಜಾನಪದ), ಗೊಮ್ಮಟದರ್ಶನ, ನಾಗರಹಳ್ಳಿ ಶ್ರೀ ಶರಣಬಸವೇಶ್ವರರು, ಕಣಜ, ಭೀಷ್ಮ ಪರ್ವಸಂಗ್ರಹ, (ಕ.ವಿ.ವಿ. ಬಿ.ಎ.–೨ ಪಠ್ಯಪುಸ್ತಕ), ಹೀಗೆ ೩೦ ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ರಾಷ್ಟ್ರೀಯ ಸ್ವಯಂಯೋಜನೆ ಮೂಲಕ ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಪ್ರಜ್ಞೆ ಜಾಗೃತಿಗೊಳಿಸಿದ್ದಕ್ಕೆ ಕರ್ನಾಟಕ ವಿಶ್ವವಿದ್ಯಾಲಯವು ಉತ್ತಮ ಎನ್.ಎಸ್.ಎಸ್. ಅಧಿಕಾರಿ ಪ್ರಶಸ್ತಿ ನೀಡಿ (೧೯೮೯–೯೦) ಗೌರವಿಸಿದೆ.

ಕನ್ನಡ ನಾಡಿನ ಪ್ರಾತಿನಿಧಿಕ ಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತು. ಕನ್ನಡ ನಾಡು, ನುಡಿ, ಸಂಸ್ಕೃತಿಯ ಏಳ್ಗೆಗಾಗಿ ೧೯೧೫ ರಲ್ಲಿ ದಿ. ಎಚ್. ವ್ಹಿ. ನಂಜುಂಡಯ್ಯನವರ ನೇತೃತ್ವದಲ್ಲಿ ಸ್ಥಾಪಿತಗೊಂಡು, ಜಿಲ್ಲೆ ಹಾಗೂ ತಾಲೂಕುಗಳಲ್ಲಿ ತನ್ನ ಶಾಖೆಗಳನ್ನು ಹೊಂದುವ ಮೂಲಕ ಕನ್ನಡ ನಾಡಿನ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುತ್ತಾ ಬಂದಿದೆ. ಸಿ. ವಿ. ಕೆರಿಮನಿಯವರು ಉಪನ್ಯಾಸಕ ವೃತ್ತಿಯೊಂದಿಗೆ ಸಾಹಿತ್ಯಿಕ ಮತ್ತು ಸಂಘಟನಾ ಅಭಿರುಚಿಯ ಪ್ರತೀಕವಾಗಿ ೧೯೭೪ ರಿಂದ ೧೯೯೮ ರವರೆಗೆ ಅವಿಭಜಿತ ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. ತಾಲೂಕಿನಾದ್ಯಂತ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳನ್ನು ಮಾಡುವ ಮೂಲಕ ಜನರಲ್ಲಿ ಸಾಹಿತ್ಯಿಕ ಪ್ರಜ್ಞೆ ಜಾಗೃತಿಗೊಳಿಸಿದ್ದಾರೆ.

೧೯೯೮ ರಲ್ಲಿ ಶಿರಹಟ್ಟಿ ತಾಲೂಕು ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಬಾಲೇಹೊಸೂರಿನಲ್ಲಿ ಯಶಸ್ವಿಯಾಗಿ ಸಂಘಟಿಸಿ ಸಾಹಿತ್ಯ ಪ್ರೇಮಿಗಳ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

## ನವಲಗುಂದ ತಾಲೂಕು ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಸರ್ವಾಧ್ಯಕ್ಷರಾಗಿ :

ಕನ್ನಡ ನಾಡು, ನುಡಿ, ಸಂಸ್ಕೃತಿಗೆ ಸಿ. ವಿ. ಕೆರಿಮನಿಯವರು ಸಲ್ಲಿಸಿದ ಸೇವೆಯನ್ನು ಗುರುತಿಸಿ ೧೯೯೭ ರಲ್ಲಿ ಧಾರವಾಡ ಜಿಲ್ಲೆಯ ನವಲಗುಂದದಲ್ಲಿ ಜರುಗಿದ ನವಲಗುಂದ ತಾಲೂಕು ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಆಯ್ಕೆಗೊಂಡರು.

## ರೋಟರಿ ಕ್ಲಬ್ ಅಧ್ಯಕ್ಷರಾಗಿ :

ಶಿಕ್ಷಣ, ಆರೋಗ್ಯ, ಸಮಾಜ ಸೇವೆ ಇವುಗಳ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುತ್ತಿರುವ ಅಂತರಾಷ್ಟ್ರೀಯ ಮಟ್ಟದ ಸಂಸ್ಥೆ ರೋಟರಿ ಕ್ಲಬ್ ಸಿ. ವಿ. ಕೆರಿಮನಿಯವರು ರೋಟರಿ ಕ್ಲಬ್ (೩೧೭೦) ಅಧ್ಯಕ್ಷರಾಗಿ ೧೯೯೮–೯೯ ರಲ್ಲಿ ಆಯ್ಕೆಗೊಂಡರು. ಅವರ ಅವಧಿಯಲ್ಲಿ ರೋಟರಿ ಶಿಕ್ಷಣ ಸಂಸ್ಥೆ

ಪ್ರಾರಂಭಗೊಂಡಿತು. ಜಾಣ ಬಡ ವಿದ್ಯಾರ್ಥಿಗಳಿಗೆ ಕಿಟ್ಸ್ ವಿತರಣೆ, ಪೋಲಿಯೋ ಲಸಿಕೆ, ಆರೋಗ್ಯವಂತ ಮಕ್ಕಳ ಸ್ಪರ್ಧೆ, ಸೈಕ್ಲಿಂಗ್ ಸ್ಪರ್ಧೆ ಹೀಗೆ ಮುಂತಾದ ಸಾಮಾಜಿಕ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಂಡರು. ರೋಟರಿ ಕ್ಲಬ್ ಅಧ್ಯಕ್ಷರಾಗಿ ೧೯೯೯ ರಲ್ಲಿ ಸಿಂಗಾಪೂರ, ಮಲೇಷಿಯಾ, ಥೈಲ್ಯಾಂಡ್ ದೇಶಗಳನ್ನು ರೋಟರಿ ಸದಸ್ಯರೊಂದಿಗೆ ಪ್ರವಾಸ ಕೈಗೊಂಡು ಸಿಂಗಾಪೂರದಲ್ಲಿ ಜರುಗಿದ ರೋಟರಿ ಜಾಗತಿಕ ಸಮಾವೇಶದಲ್ಲಿ ಪಾಲ್ಗೊಂಡಿದ್ದಾರೆ. ಸಿ. ವಿ. ಕೆರಿಮನಿಯವರ ಸೇವಾ ಮನೋಭಾವನೆ ಗುರುತಿಸಿ ರೋಟರಿ ಸಂಸ್ಥೆಯು 'ಬೇಸ್ಟ್ ರೋಟರಿ ಪ್ರಸಿಡೆಂಟ್' (೧೯೯೮-೯೯) ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

ಕನ್ನಡ ನಾಡು, ನುಡಿ ಓದುವ ಹವ್ಯಾಸ, ಬರಹಗಾರರನ್ನು ಪ್ರೋತ್ಸಾಹಿಸುತ್ತಿರುವ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ಇದರ ಸದಸ್ಯರಾಗಿ ೨೦೦೮ರಲ್ಲಿ ನೇಮಕಗೊಂಡ ಸಿ. ವಿ. ಕೆರಿಮನಿಯವರು ಕನ್ನಡ ನಾಡು, ನುಡಿ ಏಳ್ಗೆಗಾಗಿ ಹೋರಾಡಿದ ಮಹನೀಯರಾದ ಡಾ. ಆರ್. ಸಿ. ಹಿರೇಮಠ, ಶ್ರೀ ಬಸವರಾಜ ಕಟ್ಟೀಮನಿ, ಜಚನಿ, ಹುಯಿಲಗೋಳ ನಾರಾಯಣ ಹೀಗೆ ಮುಂತಾದವರು ಕುರಿತು 'ಕನ್ನಡ ಕಟ್ಟಿದವರು ಮಾಲಿಕೆ'ಯಡಿಯಲ್ಲಿ ಪುಸ್ತಕ ಪ್ರಕಟಗೊಳ್ಳಲು ಶ್ರಮಿಸಿದ್ದಾರೆ.

ಬೆಳಗಾವಿ ಜಿಲ್ಲೆಯ ಗಡಿಭಾಗದ ಪ್ರೌಢಶಾಲೆಗಳಿಗೆ ಉಚಿತ ಪುಸ್ತಕ ವಿತರಣೆ, ಗದಗ ಜಿಲ್ಲಾದ್ಯಂತ 'ನಾನು ಮೆಚ್ಚಿದ ಪುಸ್ತಕ' ಉಪನ್ಯಾಸ ಕಾರ್ಯಕ್ರಮಗಳು, ೨೦೦೯ರಲ್ಲಿ ರಾಜ್ಯಮಟ್ಟದ ವಿಚಾರ ಸಂಕೀರಣವನ್ನು ನವಲಗುಂದದ ಶ್ರೀ ಶಂಕರ ಕಲಾ, ವಾಣಿಜ್ಯ, ವಿಜ್ಞಾನ ಮಹಾವಿದ್ಯಾಲಯದ ಸಹಯೋಗದಲ್ಲಿ ಜರುಗಿಸುವಲ್ಲಿ, ೨೦೧೦ ರಲ್ಲಿ ಹಾವೇರಿಯಲ್ಲಿ ಬೇಂದ್ರೆ ಕುರಿತು ವಿಚಾರ ಸಂಕೀರಣ ಮುಂತಾದ ಕಾರ್ಯಕ್ರಮಗಳನ್ನು ಸಂಘಟಿಸಿ ಯಶಸ್ವಿಗೊಳಿಸಿದ್ದಾರೆ.

## ಕನ್ನಡ ವಿಶ್ವವಿದ್ಯಾಲಯ, ಹಂಪಿ ಸದಸ್ಯರಾಗಿ :

ಕನ್ನಡ ನಾಡು, ನುಡಿ, ಸಂಸ್ಕೃತಿ ಏಳ್ಗೆಗಾಗಿ ಹಾಗೂ ಸಂಶೋಧನೆಗಾಗಿ ಹುಟ್ಟಿಕೊಂಡ ನಾಡಿನ ಏಕಮೇವ ಸಂಸ್ಥೆ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಆಡಳಿತ ಮಂಡಳಿಯ ಸದಸ್ಯರಾಗಿ ೨೦೦೨ ರಲ್ಲಿ ನೇಮಕಗೊಂಡ ಸಿ. ವಿ. ಕೆರಿಮನಿಯವರು ವಿಶ್ವವಿದ್ಯಾಲಯದ ಹಣಕಾಸು ಸಮಿತಿ, ಕಟ್ಟಡ ಸಮಿತಿ ಸದಸ್ಯರಾಗಿ ಸರ್ವಜ್ಞ ಭವನ, ವಿದ್ಯಾರ್ಥಿನಿಯರ ನಿಲಯ, ನಿರ್ಮಿಸುವಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದ್ದಾರೆ. ಬಿಜಾಪುರದ ಬಿ.ಎಲ್.ಡಿ.ಇ. ಸಂಸ್ಥೆಯ ವಚನ ಪಿತಾಮಹ ಫ. ಗು. ಹಳಕಟ್ಟಿ ಸಂಶೋಧನಾ ಕೇಂದ್ರಕ್ಕೆ ಸ್ನಾತಕೊತ್ತರ ಕೇಂದ್ರದ ಮಾನ್ಯತೆ, ನಾಡಿನ ಚಿತ್ರಕಲಾ ಶಾಲೆಗಳನ್ನು ಕನ್ನಡ ವಿಶ್ವವಿದ್ಯಾಲಯದಲ್ಲಿ ಸೇರ್ಪಡೆ ಇವರ ಅವಧಿಯಲ್ಲಿ ಕೈಗೊಂಡವು.

## ಗದಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ :

ಗದಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಥಮ ಜಿಲ್ಲಾಧ್ಯಕ್ಷರಾಗಿ ಸಿ. ವಿ. ಕೆರಿಮನಿಯವರು ಚುನಾವಣೆಯಲ್ಲಿ ಆಯ್ಕೆಗೊಂಡು ಗದಗ ಜಿಲ್ಲಾದ್ಯಂತ ಸಾಹಿತ್ತಿಕ ಚಟುವಟಿಕೆಗಳ ಮೂಲಕ ಕನ್ನಡ ಸಾಹಿತ್ಯ ಪರಿಷತ್ತಿನತ್ತ ಜನರು ದೃಷ್ಟಿಹರಿಸುವಂತೆ ಮಾಡಿದ್ದು ಶ್ಲಾಘನೀಯ ಸಾಧನೆ.

ಸಿ. ವಿ. ಕೆರಿಮನಿಯವರು ಅಧಿಕಾರವಹಿಸಿಕೊಂಡ ಮೊದಲ ವರ್ಷದಲ್ಲಿ ಪರಿಷತ್‌ನ್ನು ಜನರು ಮನೆ ಮನೆಗಳಲ್ಲಿ ಕರೆದೊಯ್ದು ನುಡಿ ಚಿಂತನೆ ನಡೆಸಬೇಕೆಂಬ ಸದುದ್ದೇಶದಿಂದ 'ಮನೆ ಮನೆಗಳಲ್ಲಿ ಸಾಹಿತ್ಯ ಗೋಷ್ಠಿ' ಎಂಬ ವಿನೂತನ ಕಾರ್ಯಕ್ರಮವನ್ನು ಗದಗ ನಗರದಲ್ಲಿ ಪ್ರತಿ ರವಿವಾರ ಆಸಕ್ತ ಕನ್ನಡ ಸಾಹಿತ್ಯ ಪ್ರೇಮಿಗಳ ಮನೆಯಲ್ಲಿ ನಿರಂತರವಾಗಿ ೨೫ ವಾರಗಳು ನಡೆದು ಸಮಾರೋಪ ಸಮಾರಂಭವು ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳ ಸಾನಿಧ್ಯದಲ್ಲಿ ಹಾಗೂ ನಾಡೋಜ ಕವಿ ಚನ್ನವೀರ ಕಣವಿಯವರ ಅಧ್ಯಕ್ಷತೆಯಲ್ಲಿ ಜರುಗಿತು.

ಸಿ. ವಿ. ಕೆರಿಮನಿಯವರು ೨೦೦೦ದಲ್ಲಿ ಮುಂಡರಗಿಯಲ್ಲಿ ಜರುಗಿದ ಗದಗ ಜಿಲ್ಲಾ ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನವನ್ನು ವಿಮರ್ಶಕ ಡಾ. ಗಿರಡ್ಡಿ ಗೋವಿಂದರಾಜ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ಜರುಗಿಸದರಲ್ಲದೇ, ಸಾಹಿತ್ಯ ಪೂರ್ಣಿಮೆ ಮಾಸಿಕ ಕಾರ್ಯಕ್ರಮಗಳು, ಉದಯೋನ್ಮುಖ ಬರಹಗಾರರು ಕವಿಗಳಿಗಾಗಿ ನೀನಾಸಂ, ಹೆಗ್ಗೋಡು ಪ್ರತಿಷ್ಠಾನದ ಸಹಯೋಗದಲ್ಲಿ ಕಾವ್ಯಸಹೃದಯತಾ ಶಿಬಿರ ವಿಚಾರ ಸಂಕೀರಣಗಳನ್ನು ಹಮ್ಮಿಕೊಂಡರು. ಗದಗ ಜಿಲ್ಲೆಯ ಸಾಹಿತಿಗಳ ಪರಿಚಯಿಸುವ ದೃಷ್ಟಿಯಿಂದ ಗದಗ ಜಿಲ್ಲೆಯ ಬರಹಗಾರರು ಗ್ರಂಥ ಸಂಪಾದಿಸಿದ್ದು ಅಭಿನಂದನೀಯ. ಕಾವ್ಯಕಾವೇರಿ, ದತ್ತಿ ಉಪನ್ಯಾಸಗಳು, ಅಜೀವ ಸದಸ್ಯರ ಸಮಾವೇಶ, ತಾಲೂಕು ಸಮ್ಮೇಳನಗಳು, ಪ್ರತಿಭಾವಂತ ಉದಯೋನ್ಮುಖ ಸಾಹಿತಿಗಳನ್ನು ಗುರುತಿಸಿ ಸನ್ಮಾನಿಸುವುದು ಹೀಗೆ ಹತ್ತು ಹಲವು ವಿಧಾಯಕ ಕಾರ್ಯಕ್ರಮಗಳು ಜಿಲ್ಲೆಯ ಸಾಹಿತ್ಯ ಪ್ರೇಮಿಗಳು ಹಾಗೂ ಜಿಲ್ಲಾ ಕಸಾಪ ಪದಾಧಿಕಾರಿಗಳ ಸಹಕಾರದೊಂದಿಗೆ ಜರುಗಿದವು.

ಸಿ. ವಿ. ಕೆರಿಮನಿಯವರು ಜಿಲ್ಲಾ ಕಸಾಪ ಅಧ್ಯಕ್ಷರಾಗಿ ಕೈಗೊಂಡ ಅಭೂತಪೂರ್ವ ಸಾಹಿತ್ಯ ಚಟುವಟಿಕೆಗಳ ಪ್ರತಿಫಲವಾಗಿ ಎರಡನೇ ಬಾರಿಗೆ ಪುನರಾಯ್ಕೆಗೊಂಡರು. ಈ ಅವಧಿಯಲ್ಲಿ ಗದಗ ಜಿಲ್ಲಾದ್ಯಂತ ನಾಡಿನ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಸಾಹಿತಿಗಳ ಉಪನ್ಯಾಸ ಮಾಲಿಕೆ, ದೂರದರ್ಶನ ಕೇಂದ್ರ, ಬೆಂಗಳೂರು ಸಹಯೋಗದೊಂದಿಗೆ ಗದಗ ಜಿಲ್ಲಾ ಮಟ್ಟದ ಕವಿಗೋಷ್ಠಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ವತಿಯಿಂದ ಕನ್ನಡ ಸಂಸ್ಕೃತಿ ಶಿಬಿರ, ವಚನ ಕಮ್ಮಟ, ವಿಚಾರ ಸಂಕೀರಣದಂತಹ ಮಹತ್ತರ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು.

ಗದಗ ಜಿಲ್ಲೆಯ ಹಿರಿ–ಕಿರಿಯ ಕಲಾವಿದರ ಪರಿಚಯ ಹಾಗೂ ಅಗಲಿ ಹೋದ ಹಿರಿಯ ಕಲಾವಿದರ ಸಾಧನೆಯ ಕಿರು ಪರಿಚಯವನ್ನು 'ಗದಗ ಜಿಲ್ಲೆಯ ಕಲಾವಿದರು' ಎಂಬ ಗ್ರಂಥವನ್ನು ಡಿ. ವಿ. ಬಡಿಗೇರ ಅವರೊಂದಿಗೆ ಸಂಪಾದಿಸಿದ್ದು, ಸಿ. ವಿ. ಕರಿಮನಿಯವರ ಮತ್ತೊಂದು ಮಹತ್ವಪೂರ್ಣ ಸಾಧನೆಯ ಮೈಲುಗಲ್ಲು.

ಗದಗ ಜಿಲ್ಲೆ ಲಕ್ಷ್ಮೇಶ್ವರದಲ್ಲಿ ೨೦೦೪ ರಲ್ಲಿ ಗದಗ ಜಿಲ್ಲಾ ದ್ವಿತೀಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಸಾಹಿತಿ ಮನು ಬಳಿಗಾರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ಸಂಘಟಿಸಿದರು.

ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಕನ್ನಡ ಸಹಿತ್ಯ ಪರಿಷತ್ತನ್ನು ಜನರ ಬಳಿಗೆ ಕೊಂಡೊಯ್ದ ಖ್ಯಾತಿ ಸಿ. ವಿ. ಕೆರಿಮನಿಯವರಿಗೆ ಸಲ್ಲುತ್ತದೆ. ಕನ್ನಡ ಸಾಹಿತ್ಯ ಪರಿಷತ್ತನ್ನು ಜನರ ಧ್ವನಿಯಾಗಿಸಿದ್ದು ಸಿ. ವಿ. ಕೆರಿಮನಿಯವರು ಎಂದರೆ ತಪ್ಪಾಗಲಿಕ್ಕಿಲ್ಲ.

## ಸಂಘಜೀವಿ, ಸಮಾಜಮುಖಿಯಾಗಿ :

ಸಿ. ವಿ. ಕೆರಿಮನಿಯವರಿಗೆ ಸಾಹಿತ್ಯ ಮತ್ತು ಸಮಾಜ ಸೇವೆ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಲಕ್ಷ್ಮೇಶ್ವರ, ಗದಗ ಪರಿಸರದ ಸಾಹಿತ್ಯಿಕ ಮತ್ತು ಸಾಮಾಜಿಕ ಕಾರ್ಯಕ್ರಮಗಳಲ್ಲಿ ಇವರ ಪಾತ್ರವಿದ್ದೇವಿರುತ್ತದೆ ಎಂದರೆ ಅತಿಶಯೋಕ್ತಿ ಎನಿಸಲಾರದು. ಸ್ವಾತಂತ್ರ್ಯ ಹೋರಾಟಗಾರ, ದೇಶಪ್ರೇಮಿ ಹುತಾತ್ಮ ಮೈಲಾರ ಮಹಾದೇವ ಕುರಿತು ಕೃತಿ ರಚಿಸುವ ಮೂಲಕ ಶಿರಹಟ್ಟಿ ತಾಲೂಕು ತಂಗೋಡ ಗ್ರಾಮದಲ್ಲಿ ಮೈಲಾರ ಮಹಾದೇವ ಸರ್ಕಲ್ ಉದ್ಘಾಟನೆಯನ್ನು ೧೯೮೪ರಲ್ಲಿ ಅಂದಿನ ಮುಖ್ಯಮಂತ್ರಿಗಳಾಗಿದ್ದ ರಾಮಕೃಷ್ಣ ಹೆಗಡೆ, ನೀರಾವರಿ ಮಂತ್ರಿಗಳಾಗಿದ್ದ ಎಚ್. ಡಿ. ದೇವೆಗೌಡರಿಂದ ನೆರವೇರಿಸಲ್ಪಡಲು ಪ್ರಮುಖ ಪಾತ್ರವಹಿಸಿದರು.

ಲಕ್ಷ್ಮೇಶ್ವರ ಪುರಸಭೆಯ ಶತಮಾನೋತ್ಸವ ಸಮಾರಂಭದ (೧೯೭೭) ಸವಿನೆನಪಿಗಾಗಿ ಹೊರತಂದ 'ನಗರ ಸೇವಾ' ಸ್ಮರಣ ಸಂಚಿಕೆ ಸಂಪಾದಕರಾಗಿ, ತಾಯಿ ಪಾರ್ವತಿ ಮಕ್ಕಳ ಬಳಗದ ರಜತ ಮಹೋತ್ಸವದ ಸವಿನೆನಪಿಗಾಗಿ ಹೊರತಂದ 'ಧರ್ಮದಳ' ಸಂಪಾದಕರಾಗಿ, ಜನಪ್ರಿಯ ಶಾಸಕರಾಗಿದ್ದ ಗೂಳಪ್ಪ ಉಪನಾಳರ ಷಷ್ಠ್ಯಬ್ದಿಪೂರ್ತಿ ಸಮಾರಂಭದ ಸವಿನೆನಪಿಗಾಗಿ ಹೊರತಂದ 'ಯಜಮಾನ' ಸ್ಮರಣ ಸಂಚಿಕೆಯ ಸಂಪಾದಕರಾಗಿ ಉಡುಪಿಯ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಂದ ಬಿಡುಗಡೆಗೊಳಿಸಿದರು.

ಸಿ. ವಿ. ಕೆರಿಮನಿಯವರು ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ, ಲಿಂಗಾಯತ ಎಜ್ಯುಕೇಶನ ಸೊಸಾಯಿಟಿ, ಬಸವ ಸಮಿತಿ ಬೆಂಗಳೂರು, ಶರಣ ಸಾಹಿತ್ಯ ಪರಿಷತ್ತು ಬೆಂಗಳೂರು, ನವಲಗುಂದ ಶ್ರೀ ಹುರಕಡ್ಲಿ ಅಜ್ಜಾ ಶಿಕ್ಷಣ ಸಮಿತಿ, ವೀರಶೈವ ಮಹಾಸಭಾ ಬೆಂಗಳೂರು ಹೀಗೆ ಹತ್ತು ಹಲವು ಸಂಘ ಸಂಸ್ಥೆಗಳ ಕ್ರಿಯಾಶೀಲ ಸದಸ್ಯರಾಗಿದ್ದಾರೆ.

ಪುಲಿಗೆರೆ ಮುನ್ನೂರು ಖ್ಯಾತಿಯ ಲಕ್ಷ್ಮೇಶ್ವರ ಹಾಗೂ ಕುಲದೇವ ಶ್ರೀ ಸೋಮೇಶ್ವರ ದೇವಾಲಯ ಕುರಿತು 'ಪುಲಿಗೆರೆ' ಗ್ರಂಥ ರಚಿಸುವ ಮೂಲಕ ನಾಡಿಗೆ ಲಕ್ಷ್ಮೇಶ್ವರದ ಇತಿಹಾಸ, ಸಂಸ್ಕೃತಿ ಪರಿಚಯಿಸುವಲ್ಲಿ ಇವರ ಸೇವೆ ಅವಿಸ್ಮರಣೀಯ, ನಗರದ ಗೆಳೆಯರ ಬಳಗ, ಲಿಂಬಯ್ಯಸ್ವಾಮಿ ಪ್ರತಿಭಾ ಪ್ರತಿಷ್ಠಾನ, ಶ್ರೀ ಸೋಮೇಶ್ವರ ಸೇವಾ ಸಮಿತಿ ಸೇರಿದಂತೆ ಜಿಲ್ಲೆಯ ಹಲವಾರು ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ತಿಕ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದಾರೆ.

೨೦೦೧ ರಲ್ಲಿ ಸಿ. ವಿ. ಕೆರಿಮನಿಯವರ ಷಷ್ಠ್ಯಬ್ದಿ ಸಮಾರಂಭವನ್ನು ಊರ ನಾಗರಿಕರು, ಸಾಹಿತ್ಯ ಪ್ರೇಮಿಗಳು ಹಾಗೂ ಶಿಷ್ಯ ಬಳಗ ಅದ್ದೂರಿಯಾಗಿ ಲಕ್ಷ್ಮೇಶ್ವರದಲ್ಲಿ ಏರ್ಪಡಿಸಿ, 'ಚನ್ನಚೇತನ' ಹಾಗೂ 'ವಚನ ಸಾಹಿತ್ಯ ದರ್ಶನ' ಅಭಿನಂದನಾ ಗ್ರಂಥ ಸಮರ್ಪಿಸಿದ್ದು ಅವರ ಸಾಹಿತ್ಯಿಕ ಹಾಗೂ ಸಾಮಾಜಿಕ ಸೇವೆಗೆ ಸಲ್ಲಿಸಿದ ಗೌರವವಾಗಿದೆ.

ಸಿ. ವಿ. ಕೆರಿಮನಿಯನವರ ಸಾಹಿತ್ಯ ಸಮಾಜ ಸೇವೆ ಗುರುತಿಸಿ, ಶ್ರೀ ಶರೀಫ ಪ್ರಶಸ್ತಿ, ಮನುಕುಲ ಟ್ರಸ್ಟ್, ಗುಲ್ಬರ್ಗಾ ವತಿಯಿಂದ ರಾಜ್ಯಮಟ್ಟದ ಮನುಕುಲ ಪ್ರಶಸ್ತಿ (೨೦೦೦) ಅಮೋಘ ವರ್ಷ ನೃಪತುಂಗ ಪ್ರಶಸ್ತಿ (೨೦೦೬) ಲಭಿಸಿದೆ. ೨೦೧೦ ರಲ್ಲಿ ಬೆಂಗಳೂರಿನಲ್ಲಿ ಜರುಗಿದ ೭೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಇವರ ಸಾಹಿತ್ಯ ಸೇವೆ ಗುರುತಿಸಿ ಸನ್ಮಾನಿಸಲಾಗಿದೆ.

## ೨.೪ ಸಿ. ವಿ. ಕೆರಿಮನಿಯವರ ವ್ಯಕ್ತಿತ್ವ :

ಸಂಪ್ರದಾಯಸ್ಥ ಕೃಷಿ ಮೂಲ ಕುಟುಂಬದಲ್ಲಿ ಜನಿಸಿದ ಸಿ. ವಿ. ಕೆರಿಮನಿಯವರ ವ್ಯಕ್ತಿತ್ವ ಸರಳ, ಜೀವನದಲ್ಲಿ ಯಾವಾಗಲೂ ಆಡಂಬರಕ್ಕೆ ಆಶೆ ಪಟ್ಟವರಲ್ಲ. ಸಿ. ವಿ. ಕೆರಿಮನಿಯವರು ಸರಳ ಜೀವಿ ಹಾಗೂ ಸ್ನೇಹ ಜೀವಿ, ಕಾರ್ಯದಲ್ಲಿ ಎಂದೂ ಹೊಂದಾಣಿಕೆ ಮಾಡಿಕೊಂಡವರಲ್ಲ. ಆಗಬೇಕಾದ ಕೆಲಸ ನಿಗದಿತ ಸಮಯದಲ್ಲಿ ಮಾಡಿ ಮುಗಿಸುವ ಕಾರ್ಯೋತ್ಸಾಹಿ. ಲಕ್ಷ್ಮೇಶ್ವರದಲ್ಲಿ ಏನೇ ಕಾರ್ಯಕ್ರಮ ನಡೆದರೂ ಸಮಯಕ್ಕೆ ಮುಂಚಿತವಾಗಿ ಬಂದು ಅತೀ ಆನಂದದಿಂದ ಕಾರ್ಯಕ್ರಮದಲ್ಲಿ ಭಾಗವಹಿಸುವುದು ಅವರ ನಿತ್ಯದ ರೂಢಿಯಾಗಿತ್ತು. ಸದಾಕಾಲ ಸಾಹಿತ್ಯ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಅಧ್ಯಯನ ಮಾಡದೇ ತರಗತಿಗಳಿಗೆ ಹೋಗುತ್ತಿರಲಿಲ್ಲ. ಶಿಸ್ತುಬದ್ಧ ಕಾಯಕದಲ್ಲಿ ದೇವರನ್ನೇ ಕಾಣುವ ಗುಣ ಸಿ. ವಿ. ಕೆರಿಮನಿಯವರದಾಗಿತ್ತು.

ಇಂದಿನ ವಿದ್ಯಾರ್ಥಿಗಳೇ ನಾಳಿನ ಭಾರತದ ಬೆಳಕು ಎಂದು ಹೇಳುವ ಸಿ. ವಿ. ಕೆರಿಮನಿಯವರು ವಿದ್ಯಾರ್ಥಿಗಳ ಬಗ್ಗೆ ಪ್ರೀತಿ, ವಿಶ್ವಾಸ, ಮುತವರ್ಜಿ ತೋರಿಸುವುದು ಒಂದೇ ಉದ್ದೇಶಕ್ಕಾಗಿ – ಜೀವನದಲ್ಲಿ ತಾವು ಪಡೆದ ಕಷ್ಟವನ್ನು ತನ್ನ ವಿದ್ಯಾರ್ಥಿಗಳು ಪಡಬಾರದೆಂಬುದು ಅವರ ಅಭಿಪ್ರಾಯವಾಗಿತ್ತು.

**"ಚೆನ್ನಪ್ಪ ಕೆರಿಮನಿ ಎಂಬ ನಾಮಧೇಯಹೊತ್ತು**
**ನಾಡೆಲ್ಲಾ ಸುತ್ತುವ ಇವರಿಗೀಗ ಅರವತ್ತರ ಗತ್ತು**
**ನೆಲದ ಮಕ್ಕಳ ಮಮತೆಯ ಮಹಾಪೂರವೇ ಸಂಪತ್ತು**
**ಪುಲಿಗೆರೆಯ ಈ ಪ್ರತಿಭಾನ್ವಿತ ನಾಡ ಜನಕ್ಕೆಲ್ಲಾ ಗೊತ್ತು.........."**[೨]

ಎಂದು ಅವರ ಶಿಷ್ಯ ಆರೂರು ಲಕ್ಷ್ಮಣ ಶೇಟ್ ಕವಿತೆಯಲ್ಲಿ ಸಿ. ವಿ. ಕೆರಿಮನಿಯವರ ವ್ಯಕ್ತಿತ್ವ ಗುಣಗಾನ ಮಾಡಿದ್ದಾನೆ.

ಡಾ. ಸಂಗಮೇಶ ಹಂಡಗಿ ತಮ್ಮ ಲೇಖನದಲ್ಲಿ ಸಿ. ವಿ. ಕೆರಿಮನಿಯವರ ವ್ಯಕ್ತಿತ್ವವನ್ನು 'ಒಳ್ಳೆಯ ಮನಸ್ಸು, ಪ್ರೀತಿ ತುಂಬಿದ ಹೃದಯ, ಹಿತಮಿತ ಮಾತುಗಳು, ವ್ಯಷ್ಟಿ ಸಮಷ್ಟಿಗೆ ಉಪಯುಕ್ತವಾಗುವ ವಿಧಾಯಕ ವಿಚಾರಗಳು, ಸಮಯೋಚಿತ ಸಲಹೆ ಸೂಚನೆಗಳು, ಸಂಪರ್ಕಕ್ಕೆ ಬಂದವರನ್ನು ಸ್ನೇಹದಿಂದ ಕಾಣುವ ಸೂಕ್ಷ್ಮಸ್ವಭಾವ ಇಂತಹ ಗುಣಗಳಿಂದ ವ್ಯಕ್ತಿ ಸಮಾಜ ಪ್ರೀಯನಾಗುತ್ತಾನೆ' ಅಂತಹ ಜನಪ್ರೀಯ ವ್ಯಕ್ತಿಯೋ ಸ್ನೇಹಜೀವಿ ಸಿ. ವಿ. ಕೆರಿಮನಿಯರು ಎಂದು ಅಭಿಪ್ರಾಯ ಪಡುತ್ತಾರೆ.

ಗೊ. ರೂ. ಚನ್ನಬಸಪ್ಪನವರು ತಮ್ಮ ಲೇಖನದಲ್ಲಿ ಸಂಶೋಧಕನಿರಲಿ, ಕಲಾವಿದನಿರಲಿ ಅವನು ಜನ ಸಮುದಾಯದ ಮಧ್ಯೆ ಬೆಳೆಯದಿದ್ದರೆ ಆ ಸಮುದಾಯ ನಿಜವಾದ ಆಶೆ ಆತಂಕಗಳನ್ನು ನೇರ ಸಂಪರ್ಕದಿಂದ ಅರ್ಥ ಮಾಡಿಕೊಳ್ಳದಿದ್ದರೆ ಅವನ ಬರಹವಾಗಲಿ, ಕಲೆಯಾಗಲಿ ಕೇವಲ ಕಟ್ಟು ಕತೆಯಾಗುತ್ತದೆ ವಿನಹಃ ಅರ್ಥಪೂರ್ಣವಾಗಲಾರದು. ನಮ್ಮಲ್ಲಿ ಅನೇಕರಿಗೆ ಬುದ್ಧಿಜೀವಿ ಪಟ್ಟದ ಹುಚ್ಚಿದೆ. ಆದರೆ ಸಿ. ವಿ. ಕೆರಿಮನಿಯವರಿಗೆ ಬುದ್ಧಿಜೀವಿ ಪಟ್ಟದ ಹುಚ್ಚಿಲ್ಲ ಎಂತಲೇ ಅವರು ಶುದ್ಧಜೀವಿಯೂ ಅಭಿಮಾನಕ್ಕೆ ಪಾತ್ರರಾಗಿದ್ದಾರೆ ಎಂದು ಅವರ ನಿಷ್ಕಲ್ಮಶ ವ್ಯಕ್ತಿತ್ವವನ್ನು ಕೊಂಡಾಡಿದ್ದಾರೆ.

ಲೇಸನತ್ತ ಎಸಗುವ ಏಸು ಪ್ರತಿಕ್ರಿಯೆಗಳು ಬಂದರೂ ಸ್ವಚ್ಚಂದ ಮನಸ್ಸಿನಿಂದ ಸ್ವೀಕರಿಸಿ ಹದವರಿತು ಮಾತಾಡುವ ಹಿತನುಡಿಯ ವ್ಯಕ್ತಿತ್ವ ಸಿ. ವಿ. ಕೆರಿಮನಿಯವರದು. ಸಭೆ ಸಮಾರಂಭಗಳಲ್ಲಿ ಓತಪ್ರೋತವಾಗಿ ಅತ್ಯಂತ ನಿರರ್ಗಳವಾಗಿ ಸರಳ ಸುಂದರ ಭಾಷೆಯಾಗಿ, ಶೈಲಿಯಲ್ಲಿ ಮಾತನಾಡುವ ಕೌಶಲ್ಯ ಅವರದಾಗಿತ್ತು. ಸಿ. ವಿ. ಕೆರಿಮನಿಯವರು ಹಿತಮಿತ ಭಾಷೆಯಾದರೂ ಸಂದರ್ಭಕ್ಕೆ ತಕ್ಕಂತೆ ತೆಳುಹಾಸಮಯವಾಗಿ ಕೂಡಿದವರನ್ನು ನಗಿಸುತ್ತಾ ತಾವೂ ನಗುತ್ತಾ ಸಂತೋಷವನ್ನು ಅನುಭವಿಸುವವರು. ಲಕ್ಷ್ಮೇಶ್ವರ ಪರಿಸರದಲ್ಲಿ ಸಿ. ವಿ. ಕೆರಿಮನಿಯವರು ಬದುಕು-ಬರಹ ಹಾಗೂ ಸಾಹಿತ್ಯ ಸಂಸ್ಕೃತಿಕ ಕಾರ್ಯಕ್ರಮಗಳ ಸಂಘಟನೆಯಲ್ಲಿ ವಿಶಿಷ್ಟ ವ್ಯಕ್ತಿತ್ವವನ್ನು ಹೊಂದಿದವರು.

---

**೨. ಪುಲಿಗೆರೆ ಪ್ರತಿಭಾನ್ವಿತ : ಆರೂರು ಲಕ್ಷ್ಮಣ ಶೇಟ್ :**

## ೨.೫ ಸಿ. ವಿ. ಕೆರಿಮನಿಯವರ ಸಾಹಿತ್ಯದ ಸ್ಥೂಲ ನೋಟ :

ಪ್ರೋ. ಸಿ. ವಿ. ಕೆರಿಮನಿಯವರು ಕನ್ನಡ ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಸೇವೆ ಸಲ್ಲಿಸುವುದರ ಜೊತೆಗೆ ಒಳ್ಳೆಯ ವೈಚಾರಿಕ ಬರಹಗಾರರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನಂತಹ ರಾಜ್ಯಮಟ್ಟದ ಸಾಹಿತ್ಯ ಸಂಘಟನೆಗಳ ಸಂಘಟಕರಾಗಿ ಎಲ್ಲರಿಗೂ ಚಿರಪರಿಚಿತರಾಗಿದ್ದಾರೆ. ಎಲೆ ಮರೆಯ ಕಾಯಿಯಂತೆ ಸದ್ದಿಲ್ಲದೇ ಸಂಶೋಧನೆ, ವ್ಯಕ್ತಿ ಚಿತ್ರಣ ಹಾಗೂ ಸಂಪಾದನೆಗಳನ್ನೊಳಗೊಂಡು ಇಪ್ಪತ್ತೈದು ಕೃತಿಗಳನ್ನು ಹೊರತಂದಿದ್ದಾರೆ. ಮೌಲ್ಯದ ದೃಷ್ಟಿಯಿಂದ ಪ್ರೋ. ಸಿ. ವಿ. ಕೆರಿಮನಿಯವರ ಕೃತಿಗಳ ವೈಶಿಷ್ಟ್ಯ ಪೂರ್ಣವಾಗಿದೆ. ಪ್ರೋ. ಸಿ. ವಿ. ಕೆರಿಮನಿಯವರ ಸಾಹಿತ್ಯವನ್ನು ಸ್ಥೂಲವಾಗಿ ಕೆಳಗಿನ ಮೂರು ಭಾಗಗಳಲ್ಲಿ ವರ್ಗೀಕರಿಸಬಹುದು.

ಅ) ಸಂಶೋಧನಾ ಕೃತಿಗಳು
ಬ) ವ್ಯಕ್ತಿ ಚಿತ್ರಣಗಳು
ಕ) ಸಂಪಾದನೆಗಳು

### ಅ) ಸಂಶೋಧನಾ ಕೃತಿಗಳು :

ಮನುಷ್ಯ ಚಕ್ರವನ್ನು ಬಳಸಿ ಕಾಲವನ್ನು ಲೆಕ್ಕಹಾಕಿದ ಕೂಡಲೇ ಮಹಾಸಂಶೋಧಕನೆನ್ನಿಸಿದ. ಸಂಶೋಧನೆಯೆಂದರೆ ಹೊಸದನ್ನು ಹುಡುಕು ಅಥವಾ ಇದ್ದುದ್ದನ್ನು ಬೆಳಕಿಗೆ ತರುವುದು ಎಂದರ್ಥ. ತಿರುಳ್ಗನ್ನಡದ ಪರಿಸರ ಲಕ್ಷ್ಮೇಶ್ವರದಲ್ಲಿ ಸಿ. ವಿ. ಕೆರಿಮನಿಯವರಿಗೆ ಸಂಶೋಧನೆಯ ಹುಚ್ಚು ವಿದ್ಯಾರ್ಥಿದೆಸೆಯಿಂದಲೇ ಬಂದದ್ದು. ಅನೇಕ ಸಂಶೋಧನಾ ಪುಸ್ತಕಗಳ ಜೊತೆಗೆ ಬಿಡಿ ಲೇಖನಗಳನ್ನು ಅವರು ಬರೆದಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಅದರಲ್ಲೂ ವೀರಶೈವ ಸಾಹಿತ್ಯ ಆಳಕ್ಕೆ ಇಳಿದು ಅಲ್ಲಿನ ಅನರ್ಘ್ಯ ಮುತ್ತು ರತ್ನಗಳನ್ನು ಹೊತ್ತು ತಂದು ಕೆಲವೇ ಕೆಲವು ದಿಟ್ಟ ಸಂಶೋಧಕರಲ್ಲಿ ಪ್ರೋ. ಸಿ. ವಿ. ಕೆರಿಮನಿಯವರು ಒಬ್ಬರು.[೩] ಎಂದು ಅಭಿಪ್ರಾಯಪಟ್ಟಿದ್ದಾರೆ. ಅಂದರೆ ಎಪ್ಪತ್ತರ ದಶಕದಿಂದ ಇಲ್ಲಿಯವರೆಗೆ ಪ್ರೋ. ಸಿ. ವಿ. ಕೆರಿಮನಿಯವರು ಕೈಕೊಂಡ ಅಧ್ಯಯನ ಹಾಗೂ ಕ್ಷೇತ್ರಕಾರ್ಯಗಳ ಮೂಲಕ ಕನ್ನಡಿಗರಿಗೆ ಪರಿಚಿತ ಹಾಗೂ ಅಪರಿಚಿತವಾಗಿರುವ ಅನೇಕ ಸಂಗತಿಗಳ ಬಗ್ಗೆ ಸಂಶೋಧನೆ ಕೈಕೊಂಡಿದ್ದಾರೆ.

'ತಿರುಳಗನ್ನಡ ನಾಡು ಪುಲಿಗೆರೆ' ಕೃತಿಯು ಕರ್ನಾಟಕದ ಪುಲಿಗೆರೆ ಅಂದರೆ ಇಂದಿನ ಲಕ್ಷ್ಮೇಶ್ವರ ತನ್ನದೇ ಆದ ಭವ್ಯ ಪರಂಪರೆಯನ್ನು ಹೊಂದಿದ ಐತಿಹಾಸಿಕ ಸ್ಥಳ. ನಾಡೋಜ ಪಂಪನ ತಿರುಳಗನ್ನಡದ ಬೀಡು, ಆದಯ್ಯನ ಧಾರ್ಮಿಕ ನೆಲೆವೀಡು, ಲಕ್ಷ್ಮರಸನ ಸಂಪದ್ಭರಿತ ನಾಡು, ಮೇರು ಶಿಲ್ಪಕಲೆಗಳ ಗೂಡು, ಗತವೈಭವದ ಅವಶೇಷಗಳ ಕಾಡುಗಳನ್ನು ಹೊಂದಿರುವ ಸಾಹಿತ್ಯ ಮತ್ತು

೩. ನಾಕಂಡಂತೆ ಸಿ.ವಿ.ಕೆ. : ಗೊ. ರೂ. ಚನ್ನಬಸಪ್ಪ : ಚೆನ್ನಚೇತನ ಲೇಖನ

ಸಾಂಸ್ಕೃತಿಕ ಕೇಂದ್ರವಾಗಿ ಇಂದು ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸಲೆತ್ನಿಸುತ್ತಿರುವ ಅಂದಿನ ಪುಲಿಗೆರೆಯೇ ಇಂದಿನ ಆದರ್ಶ ನಗರ ಲಕ್ಷ್ಮೇಶ್ವರವಾಗಿದೆ ಎನ್ನುವುದನ್ನು ಸೋದಾಹರಣವಾಗಿ ವಸ್ತುನಿಷ್ಠವಾಗಿ ವಿವರಿಸಿದ್ದಾರೆ.

ಸಿ. ವಿ. ಕೆರಿಮನಿಯವರ ಸಂಶೋಧನೆಗೆ ಸಂಬಂಧಪಟ್ಟ ಬಿಡಿ ಲೇಖನಗಳು ಅವರ 'ಕಣಜ' ಎಂಬ ಸಂಕಲನದಲ್ಲಿ ಸಂಕಲಿಸಿ ಕೊಟ್ಟಿದ್ದಾರೆ. ಕನ್ನಡದ ಐತಿಹಾಸಿಕ ತಾಣಗಳಾದ ಲಕ್ಕುಂಡಿ, ಗದುಗು, ಬನವಾಸಿ, ಕಾಗಿನೆಲೆ, ಸಿದ್ಧರಾಮನ ಸೊಲ್ಲಾಪುರ, ಅಕ್ಕ ಅಲ್ಲಮರ ಪುಣ್ಯಕ್ಷೇತ್ರಗಳು, ಕುಂದಗೋಳ ಸ್ಥಳಗಳನ್ನು ಕುರಿತು ಸ್ಥಳನಾಮಗಳ ವೈಶಿಷ್ಟ್ಯದ ಜೊತೆಗೆ ಅಲ್ಲಿನ ಐತಿಹಾಸಿಕ ಹಾಗೂ ಚಾರಿತ್ರಿಕ ಮಹತ್ವವವನ್ನು ತಿಳಿಸುವ ಲೇಖನಗಳಾಗಿವೆ. ಗಜೇಂದ್ರಗಡ, ಹಾವೇರಿ, ನವಿಲುಗುಂದು, ಗೊಮ್ಮಟ ದರ್ಶನದ ಲೇಖನಗಳೂ ಕೂಡಾ ಸಿ. ವಿ. ಕೆರಿಮನಿಯವರ ಸ್ಥಳ ಮಹತ್ವ ಕುರಿತು ಅಧ್ಯಯನಕ್ಕೆ ಸಾಕ್ಷಿಗಳಾಗಿವೆ.

ಜೀವನದುದ್ದಕ್ಕೂ ಸಿ. ವಿ. ಕೆರಿಮನಿಯುವರು ಅಧ್ಯಾತ್ಮಿಕ ಅನುಭೂತಿಯನ್ನು ಅಳವಡಿಸಿಕೊಂಡವರು. ಲಕ್ಷ್ಮೇಶ್ವರ ಸೋಮೇಶ್ವರನ ಸನ್ನಿಧಾನದಲ್ಲಿದ್ದುಕೊಂಡು ಸಿ. ವಿ. ಕೆರಿಮನಿಯವರು ಸುತ್ತಿದ ಪ್ರವಾಸ ಮಾಡಿದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡು ಕ್ಷೆತ್ರಗಳನ್ನು ಸಂದರ್ಶಿಸಿ ಅವುಗಳ ಬಗ್ಗೆ ವ್ಯವಸ್ಥಿತ ಲೇಖನಗಳನ್ನು ಪ್ರಕಟಿಸಿದ್ದಾರೆ. ಲಕ್ಷ್ಮೇಶ್ವರದ ಸೋಮೇಶ್ವರ, ಶಿರಸು ಪವಾಡಮಠ, ಕರ್ನಾಟಕದ ಜೈನ ತೀರ್ಥಕ್ಷೇತ್ರಗಳು ಕನಕನ ಕಾಗಿನೆಲೆ, ಸರ್ವಧರ್ಮಗಳ ಸಂಗಮ ಡಂಬಳ, ಏಳುಕೊಳ್ಳದ ಎಲ್ಲಮ್ಮದೇವಿ, ಶ್ರೀಮಂತಗಡದ ಹೋಳಲಮ್ಮದೇವಿ ವೆಂಕಟಾಪುರದ ವೆಂಕಟೇಶ ಮುಂತಾದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳ ಮಹತ್ವವನ್ನು ಸಾರುವ ಹಾಗೂ ಅವುಗಳ ಹಿನ್ನೆಲೆ ಮುನ್ನೆಲೆಗಳನ್ನು ಕರಾರುವಕ್ಕಾಗ ನಿರ್ಧಿಷ್ಟ ಪಡಿಸುವ ವಿಷಯಗಳನ್ನು ವಿವರಿಸುವ ಪ್ರಯತ್ನವನ್ನು ಸಿ. ವಿ. ಕೆರಿಮನಿಯವರು ಮಾಡಿದ್ದಾರೆ.

ಸಿ. ವಿ. ಕೆರಿಮನಿಯವರ ಸಂಶೋಧನಾ ಬರಹಗಳು ಮೌಲ್ಯದ ದೃಷ್ಟಿಯಿಂದ ಹೆಚ್ಚು ಪರಿಪೂರ್ಣವಾಗಿದೆ. ಏಕೆಂದರೆ ಸಿ. ವಿ. ಕೆರಿಮನಿಯವರ ಅಧ್ಯಯನದ ಶಿಸ್ತು, ಸೂಕ್ಷ್ಮವಾಗಿ ವಿಷಯಗಳನ್ನು ಗ್ರಹಿಸುವ ಬುದ್ಧಿವಂತಿಕೆ ಎರಡೂ ಅವರ ಲೇಖನಗಳಲ್ಲಿ ಮೇಳೈಸಿವೆ.

## ಬ) ವ್ಯಕ್ತಿ ಚಿತ್ರಣಗಳು :

ಕರ್ನಾಟಕದ ಕನ್ನಡ ನಾಡಿನ ಕೆಲ ಹೋರಾಟಗಾರರು ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಕೆಚ್ಚೆದೆಯಿಂದ ಹೋರಾಡಿದ ವೀರರ ಬಗೆಗೆ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ಸಾಧನೆಗೈದಿರುವ ನಾಡಿನ ಶ್ರೇಷ್ಠರ ಜೀವನ ಸಾಧನೆಗಳನ್ನು ಕುರಿತು ಸಿ. ವಿ. ಕೆರಿಮನಿಯವರು ವಿಶೇಷ ಅಧ್ಯಯನ ಮಾಡಿ ತನ್ಮೂಲಕ ಓದುಗರಿಗೆ ಅವರ ವೈಶಿಷ್ಟ್ಯವನ್ನು

ತಿಳಿಸುವ ಕೃತಿಗಳನ್ನು ರಚಿಸಿದ್ದಾರೆ. ಅಂದಾನೆಪ್ಪ ದೊಡ್ಡಮೇಟಿ, ಸರ್ ಸಿದ್ದಪ್ಪ ಕಂಬಳಿ, ಹುತಾತ್ಮ ಮೈಲಾರ ಮಹಾದೇವ, ಕನ್ನಡದ ನಗೆಬರಹಗಾರ ಎಂ. ಎಸ್. ಸುಂಕಾಪುರ ಅವರ ಬಗೆಗೆ ವಿಸ್ತೃತವಾದ ಮಾಹಿತಿಯನ್ನು ಒದಗಿಸುವ ಕೃತಿಗಳನ್ನು ರಚಿಸಿದ್ದಾರೆ.

ವಿಷ್ಣುಶಾಸ್ತ್ರಿ ಚಿಪಳೂನಕರ ಮತ್ತು ಮೈಲಾರ ಮಹಾದೇವರ ದೇಶಪ್ರೇಮ ಹಾಗೂ ಸ್ವಾತಂತ್ರ್ಯ ಆಂದೋಲನದಲ್ಲಿ ದೇಶಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟ ವೀರರು. ಸ್ವಾತಂತ್ರ್ಯಕ್ಕಾಗಿ ಗುಪ್ತ ಸೈನ್ಯವನ್ನು ಕಟ್ಟಿ ತೆರೆಮರೆಯಲ್ಲಿ ಹೋರಾಟ ನಡೆಸಿದ ಈ ವೀರರ ಜೀವನದ ಯಶೋಗಾಥೆಯನ್ನು ಅತ್ಯಂತ ಮನಮುಟ್ಟುವಂತೆ ವಿವರಿಸಿದ್ದಾರೆ. ಮನೆತನದಿಂದ ರಾಜಯೋಗಿನಿಯಾಗಿ, ಇರುವಿಕೆಯಿಂದ ಶರಣ ಜೀವಿಯಾದ ತಾಯಿ ಪಾರ್ವತಿಬಾಯಿಯವರು ಸ್ವಾತಂತ್ರ್ಯ ಸಂಗ್ರಾಮದ ಕರೆಗೆ ಓಗೊಟ್ಟು ತಮ್ಮ ರಾಜಮನೆನತದ ವೈಭವ ತೊರೆದವರು. ಪಾರ್ವತಿ ಮಕ್ಕಳ ಬಳಗವನ್ನು ಸ್ಥಾಪಿಸಿ ಸಮಾಜೋಪಯೋಗಿ ಕಾರ್ಯಗಳನ್ನು ಕೈಕೊಂಡ ಪಾರ್ವತಿ ಬಾಯಿಯವರ ಜೀವನದ ಘಟನಾವಳಿಗಳು ಲೇಖನವನ್ನು ಕೆರಿಮನಿಯವರು ಧರ್ಮದಳ ರಜತ ಮಹೋತ್ಸವ ಸಂಚಿಕೆ ಲಕ್ಷ್ಮೇಶ್ವರ ಪುಸ್ತಕದಲ್ಲಿ ಪ್ರಕಟಿಸಿದರು.

ಕರ್ನಾಟಕ ರಾಜಕೀಯ ರಂಗದ ಕೆಲವೇ ವರ್ಣರಂಜಿತ ವ್ಯಕ್ತಿಗಳಲ್ಲಿ ಒಬ್ಬರಾದ ಉಪನಾಳ ಗೂಳಪ್ಪನವರ ವ್ಯಕ್ತಿತ್ವ, ಮನೋಗತಿ, ಕಾರ್ಯಶೈಲಿಯನ್ನು ಬಿಂಬಿಸುವ ಅರವತ್ತರ ಉಪನಾಳರ ಎಂಬ ಲೇಖನದಲ್ಲಿ ಪ್ರೋ. ಸಿ. ವಿ. ಕೆರಿಮನಿಯವರು ನವಲಗುಂದ ತಾಲೂಕಿನ ದಾಟನಾಳ ಗ್ರಾಮದ ಉಪನಾಳರ ಜೀವನದ ಹಲವಾರು ಏರಿಳಿತಗಳನ್ನು ವ್ಯಕ್ತಪಡಿಸಿದ್ದಾರೆ.

ಖ್ಯಾತ ಕನ್ನಡದ ಸಂಶೋಧಕ, ಕರ್ನಾಟಕ ವಿ.ವಿ. ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥರಾಗಿ, ಹಂಪಿ ಕನ್ನಡ ವಿ.ವಿ.ಯ ಕುಲಪತಿಗಳಾಗಿ ಕಾರ್ಯ ನಿರ್ವಹಿಸಿದ್ದ ಎಂ.ಎಂ. ಕಲಬುರ್ಗಿಯವರ ಸಂಶೋಧನಾ ವಿಧಾನ, ವಸ್ತು, ತಂತ್ರ ಇತ್ಯಾದಿಗಳನ್ನು ಸಿ. ವಿ. ಕೆರಿಮನಿಯವರು ಎಂ.ಎಂ. ಕಲಬುರ್ಗಿ ಅರವತ್ತು ಅಭಿನಂದನಾ ಗ್ರಂಥದಲ್ಲಿ ಲೇಖನವನ್ನು ಪ್ರಕಟಿಸಿದ್ದಾರೆ.

ಕನ್ನಡ ಜಾನಪದ ಸುಗಂಧವನ್ನು ಗಾಳಿಗುಂಟ ತಮ್ಮ ಸುಮಧುರ ಕಂಠದಿಂದ ಹಾಡಿ ಭಾಷಣದಿಂದ ನಾಡವರನ್ನು ಆಕರ್ಷಿಸಿದ್ದ ಜನಪದ ಸಾಹಿತ್ಯ ರತ್ನ ಕೆ. ಆರ್. ಲಿಂಗಪ್ಪನವರ ಜನಪದ ಸಾಹಿತ್ಯದ ವಿಶೇಷತೆಯನ್ನು ಕುರಿತು ಲೇಖನವನ್ನು ಸಿ. ವಿ. ಕೆರಿಮನಿಯವರು ಬರೆದಿದ್ದಾರೆ. ಹಳ್ಳಿಯ ಜೀವನ ವೈವಿಧ್ಯತೆಯಿಂದ ಕೂಡಿದೆ. ಎಲ್ಲ ರಂಗಗಳಲ್ಲಿಯೂ ನಮ್ಮವರು ಸಂತಸವನ್ನು ಕಂಡವರು. ಎಂತಹ ಸನ್ನಿವೇಶ ಬಂದರೂ ಈಸಬೇಕು. ಇದ್ದು ಜಯಿಸಬೇಕು ಒಮ್ಮೆ ಕೆ. ಆರ್. ಲಿಂಗಪ್ಪನವರೇ ಹೇಳಿದ ಮಾತು ಸಿ. ವಿ. ಕೆರಿಮನಿಯವರಿಗೆ ಪ್ರೇರಣೆಯಾಗಿದೆ.

ಗದಗ ಜಿಲ್ಲೆಯ ಲಕ್ಷ್ಮೇಶ್ವರ ಬಹು ಪುರಾತನ ಐತಿಹಾಸಿಕ ನಗರ ಅದಕ್ಕೆ ಸಾವಿರಾರು ವರ್ಷಗಳ ದೀರ್ಘ ಪರಂಪರೆ ಇದೆ. ಇಂತಹ ಲಕ್ಷ್ಮೇಶ್ವರ ಪರಿಸರದಲ್ಲಿ ವೈದ್ಯರಾಗಿ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಪರಂಪರೆಗೆ ಒಂದು ಮೂರ್ತರೂಪ ನೀಡಿದ ವೈದ್ಯೆ ಬಾಬುರಾವ ಕುಲಕರ್ಣಿಯವ ಸಮಾಜಸೇವೆಯನ್ನು ಸ್ಮರಿಸಿಸುವ ಲೇಖನದಲ್ಲಿ ಸಿ. ವಿ. ಕೆರಿಮನಿಯವರು ಧರ್ಮದ ಬೆಳಕನ್ನು ಹೊತ್ತ ದೀವಟಿಗೆಯವರು ಎಂಬ ಉಪಮೇಯವನ್ನು ಬಳಸಿದ್ದಾರೆ. ಅದು ಅರ್ಥಪೂರ್ಣವೂ ಹೌದು.

'ಹುಲಕೋಟಿಯ ಹುಲಿ' ಎಂದೇ ಕರೆಸಿಕೊಂಡ ಕೆ.ಎಚ್. ಪಾಟೀಲ ಸಹಕಾರಿ ರಂಗದ ಭೀಷ್ಮ. ಕರ್ನಾಟಕ ಕಂಡ ಅಪರೂಪದ ವ್ಯಕ್ತಿಗಳಲ್ಲಿ ದಿ.ಕೆ.ಎಚ್. ಪಾಟೀಲರೂ ಒಬ್ಬರು. ಶೋಷಣೆ ಮುಕ್ತ ಗ್ರಾಮೀಣ ಸಮಾಜದ ಸುಂದರ ಕನಸು ಕಂಡ ಕನಸುಗಾರ. ಆ ನಿಟ್ಟಿನಲ್ಲಿ ತಮ್ಮ ಪ್ರಯತ್ನದಲ್ಲಿ ಸಫಲರಾದವರು. ಶಾಸಕರಾಗಿ, ಕೃಷಿ, ಕಂದಾಯ, ಪಂಚಾಯತರಾಜ್ಯ, ಅರಣ್ಯ ವಿವಿಧ ಇಲಾಖೆಗಳ ಸಚಿವರಾಗಿ ಕೆ.ಎಚ್. ಪಾಟೀಲರು ಕೈಕೊಂಡ ಅಭಿವೃದ್ಧಿ ಕಾರ್ಯಗಳನ್ನು ಸಿ. ವಿ. ಕೆರಿಮನಿಯವರು ಸಹಕಾರಿ ರಂಗದ ಭೀಷ್ಮ ಎಂಬ ಲೇಖನದಲ್ಲಿ ಮನಮುಟ್ಟುವಂತೆ ವಿವರಿಸಿದ್ದಾರೆ.

ಸಿ. ವಿ. ಕೆರಿಮನಿಯವರು ತಮ್ಮ ಕಾಲದ ಹಾಗೂ ಕನ್ನಡ ನಾಡು ನುಡಿಗಾಗಿ ಹೋರಾಡಿದ, ಸಾಹಿತಗಳ ವ್ಯಕ್ತಿ ಚಿತ್ರಣಗಳನ್ನು ಅತ್ಯಂತ ಸ್ಪಷ್ಟವಾಗಿ ಹಾಗೂ ಎಲ್ಲಿಯೂ ಮೂಲಕ್ಕೆ ಧಕ್ಕೆಯಾಗದ ರೀತಿಯಲ್ಲಿ, ಯಾವುದನ್ನು ವೈಭವಿಕರಿಸದೇ ಸರಳವಾಗಿ ರಚಿಸಿರುವ ವ್ಯಕ್ತಿಚಿತ್ರಣಗಳು ಓದುಗರಿಗೆ ಏನಾದರೂ ಸಾಧಿಸಬೇಕೆಂಬ ಪ್ರೇರಣೆಯನ್ನು ನೀಡುವುದು ಸತ್ಯ.

## ಕ) ಸಂಪಾದನಾ ಸಾಹಿತ್ಯ :

ಸಿ. ವಿ. ಕೆರಿಮನಿಯವರು ಸುಮಾರು ಹತ್ತಕ್ಕಿಂತಲೂ ಹೆಚ್ಚು ಪುಸ್ತಕಗಳನ್ನು ಸಂಪಾದಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಂಪಾದನೆ ಒಂದು ವಿಶಿಷ್ಟ ಅರ್ಥವನ್ನು ಪಡೆದುಕೊಂಡು ಬಂದಿರುವ ಸಾಹಿತ್ಯ ಪ್ರಕಾರ. ನಾಡಿನ ಸಾಧಕರಿಗೆ ಸಾಧಿಸಿದ ಕೆಲಸಗಳ ಪೂರ್ಣ ತೃಪ್ತಿ ತಂದಾಗ ಅವರ ಅಭಿಮಾನಿಗಳು ಹೊರತರುವ ಅಭಿನಂದನಾ ಗ್ರಂಥಗಳು, ಗದಗ ಜಿಲ್ಲೆಯ ಸಾಧಕರಿಗೆ ಸಲ್ಲಿಸುವ ಅಭಿನಂದನಾ ಕಾರ್ಯಕ್ರಮದಲ್ಲಿ ಹೊರತರುವ ಅಭಿನಂದನಾ ಪುಸ್ತಕಗಳ ಸಂಪಾದಕರಾಗಿ ಸಿ. ವಿ. ಕೆರಿಮನಿಯವರು ಕಾರ್ಯ ನಿರ್ವಹಿಸಿದ್ದಾರೆ.

ಲಕ್ಷ್ಮೇಶ್ವರ ಪುರಸಭೆಯ ಶತಮಾನೋತ್ಸವ ಸಮಿತಿ ೧೯೭೭ ರಲ್ಲಿ 'ನಗರ ಸೇವಾ' ಎಂಬ ಗ್ರಂಥವನ್ನು ಹೊರತಂದಿದ್ದಾರೆ. ಲಕ್ಷ್ಮೇಶ್ವರದ ಅಭಿವೃದ್ಧಿಗಾಗಿ ಪುರಸಭೆ ಕಳೆದ ನೂರು ವರ್ಷಗಳ ಅವಧಿಯಲ್ಲಿ ಕೈಕೊಂಡ ಸಾಧನೆಯನ್ನು ಕುರಿತ ಲೇಖನಗಳ ಮಾಲೆ ಇದಾಗಿದೆ.

ಶಿರಹಟ್ಟಿ ತಾಲೂಕಿನ ಕೊಗನೂರು ಗ್ರಾಮದ ಶ್ರೀ ನಿಂಗಪ್ಪ ಕೂರಗುಂದ ಭಾರತೀಯ ಸ್ವತಂತ್ರ್ಯ ಸಂಗ್ರಾಮದಲ್ಲಿ ಮೈಲಾರ ಮಹಾದೇವರ ಬಲಗೈ ಬಂಟರಾಗಿ ಸಕ್ರಿಯವಾಗಿ ಸೇವೆ ಸಲ್ಲಿಸಿದ ವ್ಯಕ್ತಿ–ಶಕ್ತಿ ಎಂದು ಸಂಪಾದಕಿಂಯದಲ್ಲಿ ಉಲ್ಲೇಖಿಸಲಾಗಿದೆ. ಅಂತಹ ವ್ಯಕ್ತಿಗಳ ಜೀವನಾದರ್ಶನಗಳು ಮುಂದಿನ ಪೀಳಿಗೆಗೆ ಅನುಕರಣೀಯವಾಗಲೆಂಬ ಹಿರಿಯ ಸದುದ್ದೇಶ ಗ್ರಂಥ ಪ್ರಕಟನೆಯ ಹಿಂದಿದೆ.

ಶ್ರೀ ತಾಯಿ ಪಾರ್ವತಿ ಮಕ್ಕಳ ಬಳಗದ ರಜತಮಹೋತ್ಸವದ ಸವಿನೆನಪಿಗಾಗಿ 'ಧರ್ಮದಳ' ಎಂಬ ಗ್ರಂಥವನ್ನು ಸಿ. ವಿ. ಕೆರಿಮನಿಯವರು ಸಂಪಾದಿಸಿದ್ದಾರೆ. ಶ್ರೀ ತಾಯಿ ಪಾರ್ವತಿ ಮಕ್ಕಳ ಬಳಗದ ಹಿಂದಿನ ರೂವಾರಿ ತಾಯಿ ಪಾರ್ವತಿಬಾಯಿವರ ದೇಸಾಯಿ ಮನೆತನ ಉಪಭೋಗ ಸಂಸ್ಕೃತಿಯನ್ನು ಬಿಟ್ಟು ಸಾಮಾಜಿಕ ಹಾಗೂ ಸಾಂಸ್ಕೃತಿಕ ಬೆಳವಣಿಗೆಗೆ ಟೊಂಕಕಟ್ಟಿ ನಿಂತವರು. ಅವರ ಜೀವನ ಅರ್ಪಣಾ ಮನೋಭಾವ ಪುಸ್ತಕದ ಲೇಖನಗಳಲ್ಲಿ ವ್ಯಕ್ತವಾಗಿದೆ.

ಜಿ. ಎಫ್. ಉಪನಾಳರಿಗೆ ಅರವತ್ತೆಂಟು ತುಂಬಿದ ಸಂದರ್ಭದಲ್ಲಿ ಸುಮಾರು ೮೩ ಲೇಖಕರಿಂದ ಲೇಖನಗಳನ್ನು ಒಳಗೊಂಡ 'ಸ್ವಯಂಪ್ರಭೆ' ಅಭಿನಂದನಾ ಗ್ರಂಥವನ್ನು ಸಿ. ವಿ. ಕೆರಿಮನಿಯವರು ಸಂಪಾದಿಸಿದ್ದಾರೆ. ಸಾಮಾಜಿಕ ರಂಗ ರಾಜಕೀಯ ರಂಗ, ಧಾರ್ಮಿಕ ರಂಗ ಹಾಗೂ ಸಹಕಾರಿ ರಂಗದಲ್ಲಿ ಕಳೆದ ನಾಲ್ಕು ದಶಕಗಳಿಂದಲೂ ಮಹತ್ತರ ಸಾಧನೆ ಮಾಡಿರುವ ಉಪನಾಳರ ಜೀವನದ ಏಳು ಬೀಳುಗಳನ್ನು ಸುಖ ಸಂತೋಷಗಳನ್ನು ಅತ್ಯಂತ ನೇರವಾಗಿ ನಿರೂಪಿಸಿದ್ದಾರೆ. ಉಪನಾಳರ ಬಗೆಗೆ ಯಜಮಾನರು ಎಂಬ ಇನ್ನೊಂದು ಪುಸ್ತಕವನ್ನು ಸಿ. ವಿ. ಕೆರಿಮನಿಯವರು ಪ್ರಕಟಿಸಿದ್ದಾರೆ.

ಸಿ. ವಿ. ಕೆರಿಮನಿಯವರು ಗದಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಗದಗ ಜಿಲ್ಲೆಯ ಬರಹಗಾರರು. ಗದಗ ಜಿಲ್ಲೆಯ ಕಲಾವಿದರು ಎಂಬ ಪುಸ್ತಕಗಳನ್ನು ಡಿ. ವ್ಹಿ. ಬಡಿಗೇರ ಅವರ ಜೊತೆಗೂಡಿ ಸಂಪಾದಿಸಿದ್ದಾರೆ. ಗದಗ ಜಿಲ್ಲೆಯ ಬರಹಗಾರರು ಪುಸ್ತಕವನ್ನು ಮುಂಡರಗಿಯಲ್ಲಿ ನಡೆದ ಗದಗ ಜಿಲ್ಲಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಸವಿನೆನಪಿಗಾಗಿ ಪ್ರಕಟಿಸಿದ್ದು. ನೂತನ ಜಿಲ್ಲೆ ಗದಗದ ಎಲ್ಲ ಬರಹಗಾರರನ್ನು ಅಕಾರಾದಿಯಾಗಿ ಅವರ ವಿಳಾಸ, ಮತ್ತು ಸಾಹಿತ್ಯ ಸಾಧನೆಯನ್ನು ಸಂಕ್ಷೇಪ್ತವಾಗಿ ಒಂದು ಕಡೆ ಸಂಕಲಿಸಿ ಕೊಡುವ ಪ್ರಯತ್ನ ನಡೆದಿದೆ.

ಸಿ. ವಿ. ಕೆರಿಮನಿಯವರು ಯಾವಾಗಲೂ ಏನಾದರೊಂದು ಕೆಲಸ ಮಾಡುತ್ತಲೇ ಇರುವವರು. ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯರಾಗಿ ಗದಗ ಜಿಲ್ಲೆಯನ್ನು ಪ್ರತಿನಿಧಿಸುವವರು. ಗದಗ ಜಿಲ್ಲೆ – ಒಂದು ಅಧ್ಯಯನ ಹಾಗೂ ಬಾರೋ ಬಾರೋ ಚಂದ್ರಮ ಎಂಬ ಜನಪದ ಪುಸ್ತಕಗಳನ್ನು ಸಂಪಾದನೆ

ಮಾಡಿದ್ದಾರೆ. ಗದಗ ಜಿಲ್ಲೆ ಒಂದು ಅಧ್ಯಯನ ಎಂಬ ಪುಸ್ತಕದಲ್ಲಿ ಗದಗ ಜಿಲ್ಲೆಯ ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಗಳಲ್ಲಿನ ವೈಶಿಷ್ಟ್ಯಗಳನ್ನು ಜಿಲ್ಲೆಯ ಬರಹಗಾರರ ನೆರವಿನಿಂದ ಒಂದು ಮೂರ್ತರೂಪ ಕೊಡುವ ಕೆಲಸವನ್ನು ನಿರ್ವಹಿಸಿದ್ದಾರೆ.

ಕುವೆಂಪು ಶತಮಾನೋತ್ಸವ ಮಾಲಿಕೆ – ೨೦೦೪ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ಇವರ ಸಹಾಯದಿಂದ ಗದಗ ಜಿಲ್ಲಾ ಕಥಾ ಸಂಕಲನ ಪುಸ್ತಕವನ್ನು ಹೊರ ತಂದಿದ್ದಾರೆ. ಗದಗ ಜಿಲ್ಲೆಯ ಕಥೆಗಾರರ ಒಂದೊಂದು ಆಯ್ದ ಕತೆಗಳನ್ನು ಸಂಕಲಿಸಿ ಕೊಡುವ ಪ್ರಯತ್ನ ಮಾಡಲಾಗಿದೆ. ಗದಗದಲ್ಲಿ ಜರುಗಿದ ೭೬ ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ 'ಬೆಳ್ವಲ ಬೆಳಕು' ಪುಸ್ತಕವನ್ನು ಪ್ರೋ. ಸಿ. ವಿ. ಕೆರಿಮನಿಯವರು ಸಂಪಾದಿಸುವ ಕಾರ್ಯ ಮಾಡಿದ್ದಾರೆ.

ಕನ್ನಡ ನಾಡು ನುಡಿ, ಸಂಸ್ಕೃತಿ, ವಿಜ್ಞಾನ, ತಂತ್ರಜ್ಞಾನ, ಕನ್ನಡದ ಬೆಳವಣಿಗೆ, ಗಡಿ–ಹೊರನಾಡು ಕನ್ನಡಿಗರು ಎಂಬ ಉಪಶೀರ್ಷಿಕೆಗಳಲ್ಲಿ ಮೂಡಿ ನಿಂತ ಒಂದು ಸಂಗ್ರಹಯೋಗ್ಯವಾದ ಸಿ. ವಿ. ಕೆರಿಮನಿಯವರು ಸಂಪಾದಿಸಿದ 'ಚಲುವ ಕನ್ನಡ' ಪುಸ್ತಕ. ನಾಡಿನ ಕೆಲವು ಪ್ರಸಿದ್ಧ ಲೇಖಕರು ಕನ್ನಡ ನಾಡಿನ ವೈಶಿಷ್ಟ್ಯವನ್ನು ಕುರಿತು ವಿದ್ವತ್ ಪೂರ್ಣ ಲೇಖನಗಳು ಈ ಪುಸ್ತಕದಲ್ಲಿ ಪ್ರಕಟಗೊಂಡಿವೆ. ಸಿ. ವಿ. ಕೆರಿಮನಿಯವರು ಸಂಪಾದಿಸಿದ ಎಲ್ಲ ಕೃತಿಗಳು ಮೌಲ್ಯ, ಭಾಷೆ, ವಸ್ತು, ರೂಪ ಇತ್ಯಾದಿ ಕಾರಣಗಳಿಗಾಗಿ ಕನ್ನಡಿಗರು ಓದಲೇಬೇಕಾದ ಪುಸ್ತಕಗಳು.

ಸಿ. ವಿ. ಕೆರಿಮನಿಯವರ ಬದುಕು, ಬರಹ ಎರಡೂ ತಾಳೆಯಾಗುವಂತವು. ಏಕೆಂದರೆ ಪ್ರೋ. ಸಿ. ವಿ. ಕೆರಿಮನಿಯವರು ಲೇಖಕರು, ವಾಗ್ಮಿಗಳು, ಉಪನ್ಯಾಸಕರು ಸಂಘಟನಾ ಚತುರರು ಎಂಬುವುದರಲ್ಲಿ ಎರಡು ಮಾತಿಲ್ಲ. ತಾವು ಅಧ್ಯಯನದಿಂದ ಗಳಿಸಿದ ಜ್ಞಾನದ ಸಂಪತ್ತನ್ನು ತಮ್ಮ ಸುತ್ತಲ ಸಮುದಾಯದೊಡನೆ ಹಂಚಿಕೊಳ್ಳುವ ಸ್ವಭಾವದವರು. ಅಂತೆಯೇ ಅವರಲ್ಲಿ ಸಂಶೋಧಕನ ತಾಕತ್ತು ಇರುವುದು. ಗದಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಕಾಲದಲ್ಲಿ ಪರಿಷತ್ತಿಗೆ ಒಪ್ಪುವಂತಹ ಕಾರ್ಯಚಟುವಟಿಕೆಗಳನ್ನು ಸಿ. ವಿ. ಕೆರಿಮನಿಯವರು ನಡೆಸಿದ್ದಾನೆ. ಸಂಘಟಿಸಿದ್ದಾರೆ. ಆ ಕಾರಣಕ್ಕಾಗಿ ಸಿ. ವಿ. ಕೆರಿಮನಿಯವರು ವಿಶಿಷ್ಟವಾಗಿ ನನ್ನ ಅಧ್ಯಯನಕ್ಕೆ ಪ್ರೇರಣೆಯೆನಿಸಿದೆ.

# ಅಧ್ಯಾಯ – ೩ :
# ಸಿ. ವಿ. ಕೆರಿಮನಿಯವರ ಸಂಶೋಧನೆಗಳು

ಕೆರಿಮನಿಯವರು ಅಪಾರವಾದ ವಿದ್ವತ್‌ನ್ನು ಸಂಪಾದಿಸಿದಂತವರು. ಈ ಮಾತಿಗೆ ಶ್ರೀಯುತ ಹಲವು ಸಂಶೋಧನೆಗಳೇ ಸಾಕ್ಷಿ. ಒಬ್ಬ ಸಂಶೋಧಕನಿಗೆ ಇರಬೇಕಾದ ತಾಳ್ಮೆ ನಿರಂತರ ಪ್ರಯತ್ನ ಒಂದು ವಿಷಯವನ್ನು ವಿವಿಧ ಮಗ್ಗುಲುಗಳಲ್ಲಿ ನೋಡುತ್ತ ಅದಕ್ಕೆ ಒಂದು ಸುಂದರ ಆಕಾರ ಕೊಡುವ ರೀತಿ ಕೆರಿಮನಿಯವರಲ್ಲಿದೆ. ತಮ್ಮ ವೃತ್ತಿ, ಪ್ರವೃತ್ತಿಯಲ್ಲಿ ಅಪಾರ ಶಿಸ್ತನ್ನು ಅಳಿಡಿಸಿಕೊಂಡ ಕೆರಿಮನಿಯವರು ತಮ್ಮ ಸಂಶೋಧನೆಗಳಿಗೂ ಮುಖ್ಯ ತಲೆಬರಹ ಉಪ ತಲೆಬರಹಗಳಿಗೂ ಹೆಸರು ನೀಡುವಲ್ಲಿ ತಮ್ಮ ಜಾಣ್ಮೆಯನ್ನು ತೋರಿದಂತವರು ಶ್ರೀ ಕೆರಿಮನಿಯವರು ತಾವು ಬೆಳೆದ ಕಾಳುಗಳು ಅಲ್ಲಲ್ಲಿ ಬಿದ್ದು ಕಣ್ಮರೆಯಾಗದಂತೆ ಒಂದು ಕಡೆ ಸೇರಿಸಿ ಕಣಜ ಕಟ್ಟಿ, ಓದುಗರ ಕೈಗೆ ಕೊಟ್ಟಿದ್ದಾರೆ. ಬೇರೆ ಬೇರೆ ಸಂದರ್ಭಗಳಲ್ಲಿ ಸೃಷ್ಟಿಯಾದ ಲೇಖನಗಳನ್ನು ಸಂಗ್ರಹಿಸಿ ಪ್ರಕಟಿಸಿರುವ ಕೆರಿಮನಿ ಅವರ ಕಾರ್ಯ ಪ್ರಶಂಸನೀಯವಾಗಿದೆ.

ಪ್ರಸ್ತುತ ಅಧ್ಯನಯದ ದೃಷ್ಟಿಯಿಂದ ನಾವು ಕೆರಿಮನಿಯವರ ಸಂಶೋಧನೆಗಳನ್ನು ಕ್ಷೇತ್ರವಾರು, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರ, ಸಾಹಿತ್ಯ ಕ್ಷೇತ್ರ ಹಾಗೂ ಇತರೆ ಸಂಶೋಧನೆಗಳು ಎಂದು ವಿಂಗಡಿಸಿಕೊಂಡು ಅಭ್ಯಸಿಸಬಹುದು.

## ೩.೧ ಕ್ಷೇತ್ರವಾರು ಸಂಶೋಧನೆಗಳು :

ನಮ್ಮ ಕನ್ನಡ ನಾಡಿನ ಇತಿಹಾಸ ಅದ್ಭುತತೆಯಿಂದ ಕೂಡಿರುವಂತದ್ದು, ಸಾವಿರಾರು ವರ್ಷಗಳಿಂದ ಕನ್ನಡ ನಾಡನ್ನು ಅನೇಕ ರಾಜವಂಶಗಳು ಆಳ್ವಿಕೆ ನಡೆಸಿವೆ. ಆ ರಾಜ ಮಹಾರಾಜರುಗಳು ಆಳ್ವಿಕೆ ನಡೆಸಿದ ನಿರ್ಮಿತಿಯ ರಮಣೀಯ ಕ್ಷೇತ್ರಗಳು ಮತ್ತು ಧಾರ್ಮಿಕ ಕ್ಷೇತ್ರಗಳು ನಮ್ಮ ನಾಡಿನಲ್ಲಿ ಹಲವಾರು ಇರುವುದು ನಮಗೆಲ್ಲ ಗೊತ್ತಿರುವ ಸಂಗತಿಯಾಗಿದೆ.

ಅಂತೆಯೇ ಎಷ್ಟೋ ಕ್ಷೇತ್ರಗಳು ನಮ್ಮ ನಿರ್ಲಕ್ಷ್ಯದಿಂದಾಗಿ ತಮ್ಮ ಗತ ವೈಭವವನ್ನು ಕಳೆದುಕೊಂಡಿವೆ. ಹಾಗೂ ಅವುಗಳ ಇತಿಹಾಸದ ಮಾಹಿತಿಯ ಕೊರತೆಯೂ ಇದೆ. ಇದಕ್ಕೆ ಕಾರಣ ಆ ಕ್ಷೇತ್ರಗಳ

ಕುರಿತು ಸಂಶೋಧಕರ ಕೊರತೆ. ಇಂತಹ ವಿರಳರ ಕ್ಷೇತ್ರದಲ್ಲಿ ತಮ್ಮ ಅಪೂರ್ವ ಆಸಕ್ತಿಯಿಂದ ತಮ್ಮ ಸುತ್ತಲಿನ ಅಮೂಲ್ಯ ಕ್ಷೇತ್ರಗಳ ಜೊತೆಗೆ ಕನ್ನಡ ನಾಡಿನ ಹಲವು ಕ್ಷೇತ್ರಗಳ ಕುರಿತ ಅಪರೂಪದ ಮಾಹಿತಿಯ ಕಣಜವನ್ನು ಕೆರಿಮನಿಯವರ ಕೃತಿಗಳಿಂದ ನಾವು ಪಡೆಯಬಹುದು.

ಕೆರಿಮನಿಯವರು ಲಕ್ಷ್ಮೇಶ್ವರ, ಲಕ್ಕುಂಡಿ, ಕರ್ನಾಟಕದ ಜೈನ ತೀರ್ಥಕ್ಷೇತ್ರಗಳು ಗದುಗ, ಬನವಾಸಿ, ಕಾಗಿನೆಲೆ, ಸೊಲ್ಲಾಪೂರ, ಅಕ್ಕಮಹಾದೇವಿ, ಅಲ್ಲಮಪ್ರಭುಗಳು ನೆಲೆಸಿದ್ದ ಪುಣ್ಯಕ್ಷೇತ್ರಗಳು, ಕುಂದಗೋಳ, ಸಿರಿಗಿರಿ, ಹಾವೇರಿ, ನವಿಲುಗುಂದ ಹಾಗೂ ಶ್ರವಣ–ಬೆಳಗೊಳ ಹೀಗೆ ಹತ್ತು ಹಲವು ಕ್ಷೇತ್ರಗಳು ಅಪರೂಪದ ಕ್ಷೇತ್ರಗಳು, ಐತಿಹಾಸಿಕ ಕ್ಷೇತ್ರಗಳ ಮಾಹಿತಿಯನ್ನು ತಮ್ಮ ಲೇಖನಿಯಿಂದ ಕೃತಿಗಳಿಸಿದ್ದಾರೆ. ಅವೆಲ್ಲವೂ ಮುಂಬರುವ ಪೀಳಿಗೆಗೆ ಮಾಡಿದ ಮಹದುಪಕಾರವೆಂದೇ ಹೇಳಬೇಕಾಗುತ್ತದೆ. ಕೆರಿಮನಿಯವರ ಆ ಕ್ಷೇತ್ರಗಳ ಕಣಜವನ್ನು ನಾವು ಈ ಕೆಳಕಂಡಂತೆ ವಿಶ್ಲೇಷಣೆಗೈಯಬಹುದು.

**೧. ಲಕ್ಷ್ಮೇಶ್ವರ :**

ಅಂದಿನ ಪುಲಿಗೆರೆಯೇ ಇಂದಿನ ಲಕ್ಷ್ಮೇಶ್ವರವಾಗಿದೆ. ಕನ್ನಡ ಆದಿ ಕವಿ ಪಂಪನ ತಿರುಳ್ಗನ್ನಡದ ಬೀಡು; ಆದಯ್ಯನ ಧಾರ್ಮಿಕ ನೆಲೆವೀಡು; ಲಕ್ಷ್ಮರಸನ ಸಂಪದ್ಭರಿತ ನಾಡು; ಮೇರು ಶಿಲ್ಪ ಕಲೆಗಳ ಗೂಡು – ಹೀಗೆ ಸಾಗುತ್ತದೆ ಸಿ. ವಿ. ಕೆರಿಮನಿಯವರ ಲೇಖನ.

ಪ್ರಾಚೀನ ಕಾಲದಿಂದಲೂ ಪುಲಿಗೆರೆ ಅಥವಾ ಹುಲಿಗೆರೆ ಎಂದಿದ್ದ ಹೆಸರು ಕ್ರಿ.ಶ. ೧೦೭೪ ರಲ್ಲಿ ಆಳುತ್ತಿದ್ದ ಲಕ್ಷ್ಮರಸನು ತನ್ನ ಹೆಸರಿನ ಶಿವಾಲಯವನ್ನು ನಿರ್ಮಿಸಿ ಅದಕ್ಕೆ "ಲಕ್ಷ್ಮೇಶ್ವರ" ಎಂಬ ನಾಮಕರಣ ಮಾಡಿದನು. ಕಾಲಾನುಕ್ರಮದಲ್ಲಿ ಪುಲಿಗೆರೆಯ ಹೆಸರು ನಿಂತು ಹೋಗಿ "ಲಕ್ಷ್ಮೇಶ್ವರ" ಎಂದಾಯಿತು. ಈ ಪುಲಿಗೆರೆಯ ನಾಡನ್ನು ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕದಂಬರು, ಕಲಚೂರಿಗಳು, ಸೇವುಣರು, ವಿಜಯನಗರ ಸಾಮ್ರಾಜ್ಯ ಹೀಗೆ ಅನೇಕ ಅರಸು ಮನೆತನಗಳು ಸುಮಾರು ೯೦೦ ವರ್ಷಗಳವರೆಗೆ ಆಳ್ವಿಕೆ ನಡೆಸಿ ಲಕ್ಷ್ಮೇಶ್ವರದ ವೈಭವವನ್ನು ಎಳೆಎಳೆಯಾಗಿ ಕಟ್ಟಿಕೊಟ್ಟಿದ್ದಾರೆ.

ಲಕ್ಷ್ಮೇಶ್ವರದಲ್ಲಿನ "ಶಂಖಬಸದಿ", 'ಗೊಗ್ಗಿಯ ಬಸದಿ', ಶ್ರೀ ವಿಜಯ ಬಸದಿಗಳ ಜೊತೆಗೆ ಇನ್ನೂ ಹಲವು ಬಸದಿಗಳ ಕುರಿತ ಮಾಹಿತಿಯನ್ನು ಇಲ್ಲಿ ಕಟ್ಟಿಕೊಟ್ಟಿದ್ದಾರೆ. ಹಾಗೆಯೇ ಪುಲಿಗೆರೆಯ ಕುಲದೈವ ಶ್ರೀ ಸೋಮನಾಥ ದೇಗುಲದ ಮಾಹಿತಿಯಂತೂ ಎಳೆಎಳೆಯಾಗಿ ಮನದುಂಬಿ ಬಿಡಿಸಿಟ್ಟಿದ್ದಾರೆ. ಬಾಳೇಶ್ವರ ದೇವಾಲಯದ ಗೋಡೆಯ ಕೆತ್ತನೆಗಳು ನೈಜತೆ, ಸಹಸ್ರಲಿಂಗದ ಮೇಲಿನ ಚಿಕ್ಕ ಚಿಕ್ಕ ೯೯೯ ಲಿಂಗಗಳ ಕೆತ್ತನೆ ಕುರಿತ ಮಾಹಿತಿ, ಪಂಚತೀರ್ಥಗಳ ವಿಷಯವನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಲಕ್ಷ್ಮೇಶ್ವರದ ಶ್ರೀ ಸೋಮೇಶ್ವರ ದೇಗುಲದಲ್ಲಿ ಸಾಮಾನ್ಯವಾಗಿ ಶೈವದೇಗುಲಗಳಲ್ಲಿ ಕಾಣಸಿಗುವ ಲಿಂಗ ಹಾಗೂ ಎದುರುಗಡೆ ಇರುವ ನಂದಿ ಇಲ್ಲಿಲ್ಲ. ಇಲ್ಲಿಯ ಮುಖ್ಯ ವೈಶಿಷ್ಟ್ಯವೆಂದರೆ ಶಿವ ಪಾರ್ವತಿಯವರು ನಂದಿಯನ್ನೇರಿ ಕುಳಿತಿದ್ದಾರೆ ಎಂಬ ವಿಷಯವನ್ನು ಕೆರಿಮನಿಯವರು ಪ್ರಸ್ತಾಪಿಸುತ್ತಾ ಇದಕ್ಕೆ

ಹರಿಹರನ ಗಿರಿಜಾಕಲ್ಯಾಣದ ಉಕ್ತಿಯನ್ನು ನಿದರ್ಶನವಾಗಿ ಕೊಡುತ್ತಾರೆ. ಹರಿಹರಸಿ ಆ ಉಕ್ತಿಯಂತೆ ಈಶ್ವರನು ಪರ್ವತರಾಜನ ಕುವರಿ ಪಾರ್ವತಿಯನ್ನು ಮದುವೆಯಾಗಿ ಅವಳ ಜೊತೆ ವೃಷಭಾರೂಢನಾಗಿ ಕೈಲಾಸಕ್ಕೆ ಹೊರಟ ಚಿತ್ರಣ ಇರಬೇಕೆಂದು ತೋರುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ದಕ್ಷಿಣ ಭಾರತದಲ್ಲೇ ವಿಶಿಷ್ಟವಾದ ಈ ವಿಗ್ರಹದ ಕುರಿತ ಮಾಹಿತಿ ನೀಡುವಾಗ ಕೆರಿಮನಿಯವರ ಸ್ವಾಧ್ಯಾಯ ಸಾಮರ್ಥ್ಯ ನಮಗೆ ತಿಳಿದು ಬರುತ್ತದೆ.

ಹಾಗೆಯೇ ಪೇಟೆಯ ಮಡಿಲಲ್ಲಿರುವ ಜುಮ್ಮಾ ಮಸೀದಿಯೊಂದು ಪ್ರೇಕ್ಷಣೀಯ ಸ್ಥಳವಾಗಿದ್ದು ಅದರ ಇತಿಹಾಸವನ್ನು ನಾವಿಲ್ಲಿ ಕಾಣಬಹುದು.

## * ಲಕ್ಕುಂಡಿಯ ದೇವಾಲಯಗಳು :

**ಕೆರಿಮನಿಯವರು ಕ್ಷೇತ್ರವಾರು ಸಂಶೋಧನೆಗಳಲ್ಲಿ ಲಕ್ಕುಂಡಿಯ ದೇವಾಲಯಗಳನ್ನು ಕುರಿತ** ಮಾಹಿತಿಯೂ ಪ್ರಮುಖವಾಗಿದೆ. ಲಕ್ಕುಂಡಿಯನ್ನು ಪ್ರಾಚೀನ ಕಾಲದಲ್ಲಿ ಲೊಕ್ಕಿಗುಮಡಿ ಎಂದು ಕರೆಯುತ್ತಿದ್ದರು. ಲೊಕ್ಕಿ ಎಂದರೆ ಎಕ್ಕಿತ ಗಿಡ, ಗುಂಡಿ ಎಂದರೆ ತಗ್ಗದ ಪ್ರದೇಶ. ಲೊಕ್ಕಿಗುಂಡಿ ಕಾಲಾನುಕ್ರಮದಲ್ಲಿ ಲಕ್ಕುಂಡಿಯಾದ ಸ್ಥಳ ನಾಮದ ಕಥೆ ಬಿಚ್ಚಿಕೊಳ್ಳುತ್ತದೆ. ಪರಮ ಜಿನಭಕ್ತೆ ಅತ್ತಿಮಬ್ಬೆ ಇದೇ ಲಕ್ಕುಂಡಿಯವಳು. ಆಕೆ ಕವಿಚಕ್ರವರ್ತಿಗೆ ರನ್ನನಿಗೆ ಆಶ್ರಯ ನೀಡಿದಂತಹ ಮಹಾತಾಯಿ ಎಂದು ಲಕ್ಕುಂಡಿಯ ಜೈನಧರ್ಮದ ಕೇಂದ್ರದ ವೃತ್ತಾಂತ ಹರವನ್ನು ನಾವು ಇವರ ಕೃತಿಯಲ್ಲಿ ಕಾಣುತ್ತೇವೆ.

ಲಕ್ಕುಂಡಿಯ ಪ್ರಮುಖ ದೇವಾಲಯಗಳಾದ ೧) ಬ್ರಹ್ಮ ಜಿನಾಲಯ, ೨) ಕಾಶಿ ವಿಶ್ವೇಶ್ವರ, ೩) ನನ್ನೇಶ್ವರ, ೪) ಮಾಣಿಕೇಶ್ವರ, ೫) ಹಾಗುಂದ ಬಸವಣ್ಣ, ೬) ಶ್ರೀ ಸೋಮೇಶ್ವರ, ೭) ಶ್ರೀ ನೀಲಕಂಠೇಶ್ವರ, ೮) ಶ್ರೀ ವೀರಭದ್ರ,, ೯) ಲಕ್ಷ್ಮೀನಾರಾಯಣ, ೧೦) ಕುಂಬಾರ ಗಿರೀಶ್ವರ (ನಾದಯದೇವ), ೧೧) ನಾಗರ ದೇವರು, ೧೨) ವಿಶ್ವನಾಥ ದೇವಾಲಯ ಹೀಗೆ ಇನ್ನೂ ಅನೇಕ ದೇವಾಲಯಗಳನ್ನು ಹೆಸರಿಸುತ್ತಾ, ಆ ದೇವಾಲಗಳ ಕುಶಲ ಶಿಲ್ಪಕಲೆಯನ್ನು ನಿರ್ಮಾತೃಗಳ ಹೆಸರನ್ನು ಕಾಲವನ್ನು ಹೀಗೆ ಹತ್ತು ಹಲವು ವಿಷಯಗಳನ್ನು ಈ ಲೇಖನಗಳು ಒಳಗೊಂಡಿವೆ. ಕೆರಿಮನಿಯವರು ನಮ್ಮ ಐತಿಹಾಸಿಕ ಕ್ಷೇತ್ರಗಳ ಬಗ್ಗೆ ಹೇಳಿದಷ್ಟೂ ಮತ್ತೆ ಮತ್ತೆ ಉತ್ಸಾಹಿತರಾಗುವ ಮನಸ್ಸಿನಿಂದ, ಹೆಮ್ಮೆ, ಅಭಿಮಾನದಿಂದ ತಮ್ಮ ಪದ ಪುಂಜಗಳಲ್ಲಿ ಸೆರೆಹಿಡಿದಿದ್ದಾರೆ.

## * <u>ಕರ್ನಾಟಕದ ಜೈನ ತೀರ್ಥಕ್ಷೇತ್ರಗಳು :</u>

ಕರ್ನಾಟಕದ ಇತಿಹಾಸದಲ್ಲಿ ಜೈನರ ಸೇವೆ ಅಮೂಲ್ಯವಾದದು. ವಾಸ್ತುಶಿಲ್ಪ, ಚಿತ್ರಕಲೆ, ಸಂಗೀತ, ಸಾಹಿತ್ಯಕ್ಕೆ ಅವರ ಕೊಡುಗೆ ಅಗಾಧವಾದುದಾಗಿದೆ. ಕರ್ನಾಟಕದಲ್ಲಿ ಶ್ರವಣಬೆಳ್ಗೊಳ, ಮೂಡಬಿದಿರೆ, ಕಾರ್ಕಳ ಮುಂತಾದ ಕ್ಷೇತ್ರಗಳೇ ಅದಕ್ಕೆ ಸಾಕ್ಷಿಯಾಗಿವೆ. ಮಹಮ್ಮದೀಯರ ಹಾಗೂ ಇತರರ ದಾಳಿಯಿಂದ ಮತ್ತು ಇಂದಿನವರ ಅನಾದರ ಇವುಗಳಿಂದ ಅನೇಕ ತೀರ್ಥಕ್ಷೇತ್ರಗಳು

ನಾಶವಾಗಿದ್ದರೂ ಅಳಿದುಳಿದು ಮತ್ತೆ ತನತನವನ್ನು ಮರೆಯುತ್ತಿರುವ ಕೆಲವು ಜೈನರ ಮಹತ್ವದ ತೀರ್ಥಕ್ಷೇತ್ರಗಳ ಬಗೆಗೆ ಕೆರಿಮನಿಯವರು ಚಿಕ್ಕದಾಗಿ, ಚೊಕ್ಕಟವಾಗಿ ಕಿರು ಪರಿಚಯ ನೀಡುತ್ತಾ ಹೋಗುತ್ತಾರೆ.

*** ಗೊಮ್ಮಟಗಳ ದರ್ಶನ :**

ಹಾಸನ ಜಿಲ್ಲೆಯ ಶ್ರವಣಬೆಳುಗೋಳದ ವಿಂಧ್ಯಗಿರಿ (ಇಂದ್ರಗಿರಿ) ಯಲ್ಲಿ ಚಾವುಂಡರಾಯ ನಿರ್ಮಿಸಿದ್ದ ಐವತ್ತೇಳು ಅಡಿ ಎತ್ತರದ ಗೊಮ್ಮಟೇಶನ ಮೂರ್ತಿಯ ಕುರಿತ ಸಾಕಷ್ಟು ಮಾಹಿತಿಯನ್ನು ಲೇಖಕರು ಕೊಡುತ್ತಾ ಜೊತೆಗೆ ಅದಕ್ಕೆ ಸಂಬಂಧಪಟ್ಟ ಶಾಸನಗಳ ಉಲ್ಲೇಖ (ಉದಾ : ಕ್ರಿ.ಶ. ೧೧೮೦ ರ ಬೊಪ್ಪಣ್ಣ ಪಂಡಿತರ ಶಾಸನ) ಮಾಡುತ್ತಾ, ಅದಕ್ಕೆ ಸಂಬಂದಪಟ್ಟ ಕನ್ನಡ ಸಾಹಿತ್ಯವನ್ನು, ಕವಿಗಳನ್ನು ಉದಾಹರಿಸುತ್ತಾ ನೀಡುವ ವಿಶ್ಲೇಷಣೆ ಓದುಗನಿಗೆ ಕೋಶದಲ್ಲೇ ದೇಶ ಕಂಡ ಅನುಭವ ಬರುವಂತಿದೆ.

ಅದೇ ರೀತಿಯಾಗಿ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳದ ಗೊಮ್ಮಟನ ಪರಿಚಯ ಕೊಡುತ್ತಾ ಸಾಗುವ ಲೇಖಕರು ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ವೇಣೂರಿನ ಗೊಮ್ಮಟೇಶನ ಪರಿಚಯ ಮಾಡುತ್ತಾರೆ.

ಪ್ರಾಚೀನವಾದ ಇನ್ನೆರಡು ಬಾಹುಬಲಿ ಮೂರ್ತಿಗಳು ಮೈಸೂರು ಜಿಲ್ಲೆಗೆ ಸಂಬಂಧಿಸದವು. ಒಂದು ಇಲವಾಲದ ಬಳಿ ಶ್ರವಣಗುಡ್ಡದ ಬಾಹುಬಲಿ, ಮತ್ತೊಂದು ಕನ್ನಂಬಾಡಿ ಕಟ್ಟೆಯ ಹತ್ತಿರದ ಬಸ್ತಿಹಳ್ಳಿ ಬಾಹುಬಲಿ. ಹೀಗೆ ಕೆರಿಮನಿಯವರ ಲೇಖನಿಯಿಂದ ಮಾಹಿತಿಯ ಕಣಜ ಎಳೆ ಎಳೆಯಾಗಿ ಬಿಚ್ಚಿಕೊಳ್ಳುತ್ತದೆ.

ಶ್ರೀ ಧರ್ಮಸ್ಥಳ (ದಕ್ಷಿಣಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲೂಕು) ಶ್ರೀ ಕ್ಷೇತ್ರದ ಪರಿಚಯ ಮತ್ತು ವಿಶೇಷತೆಯಿಂದ ಮೂಡಿಬಂದಿದೆ. ಹೆಗ್ಗಡೆಯವರು ಜೈನರು, ಅವರು ಜಿನನ ಭಕ್ತರು, ಆದರೂ ಮಂಜುನಾಥ ದೇವಾಲಯದ ಆಡಳಿತಗಾರರು. ಆ ದೈವದಲ್ಲಿಯೇ ನಿಷ್ಠೆಯುಳ್ಳವರು. ಶ್ರೀ ಮಂಜುನಾಥ ಒಂದು ಶಿವಲಿಂಗವಷ್ಟೇ ಆದರೆ ಅದರ ಅರ್ಚಕರು ವೈಷ್ಣವರು ಹೀಗೆ ವಿವಿಧ ಧರ್ಮಗಳ ಸಮ್ಮೀಳನವೇ ಇಲ್ಲಿದೆ. ಈ ತೆರನಾದ ಮಾಹಿತಿಯ ಕಣಜ ಇಲ್ಲಿ ಸಾಕಷ್ಟಿದೆ.

ಲೇಖಕರು ಮುಂದುವರಿಯುತ್ತಾ ಜೈನರ ದಕ್ಷಿಣ ಕಾಶಿ ಮೂಡಬಿದಿರೆಯ ಸ್ಥಳನಾಮವನ್ನು ಪರಿಚಯಿಸುತ್ತಾ ಕ್ಷೇತ್ರವನ್ನು ಪರಿಚಯಿಸಿದ್ದಾರೆ. ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕಿನ ಹೊಂಬುಜ, ಹಾಸನ ಜಿಲ್ಲೆಯ ಹಳೇಬೀಡು, ಬಾದಾಮಿ, ಐಹೊಳೆ, ಲಕ್ಮೇಶ್ವರ, ಲಕ್ಕುಂಡಿಯ ಬಗೆಗೆ ವಿವರ ಮಾಹಿತಿ ಕೊಡುತ್ತಾ ಇತರ ಜೈನ ತೀರ್ಥ ಕ್ಷೇತ್ರಗಳು ಎಂಬ ತಲೆಬರಹದಡಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ತಾಲೂಕಿನ ವರಂಗ, ಶಿವಮೊಗ್ಗ ಜಿಲ್ಲೆಯ ಸಿಂಹನಗದ್ದೆ, ಬೆಳಗಾವಿ ಜಿಲ್ಲೆಯ ಸ್ತವನಿಧಿ ಹೀಗೆ ಸಾಗುತ್ತದೆ ಮಾಹಿತಿಯ ಝರಿ.

ಒಟ್ಟಿನಲ್ಲಿ ಕರ್ನಾಟಕದ ಅನೇಕ ಬಸದಿಗಳ ಜೈನತಾಣಗಳ ಪರಿಚಯ ಕೊಡುತ್ತಾ ಅವು ನಮ್ಮ ನಾಡಿನ ಸಂಸ್ಕೃತಿ ಹಿರಿಮೆ ಗರಿಮೆಗಳನ್ನು ಮೆರೆದ ಸಂಗತಿ ಅಪೂರ್ವವಾಗಿ ಮೂಡಿಬಂದಿದೆ.

**ವೀರನಾರಾಯಣನ ಊರು, ಶಿಲ್ಪಕಲೆಗಳ ಬೀಡು – ಗದುಗ**

ಶೈವ, ಜೈನ, ವೈಷ್ಣವ, ಮತಗಳ ತ್ರಿವೇಣಿ ಸಂಗಮದ ನೆಲೆಯಾಗಿ, ಶಿಲ್ಪಕಲೆಯ ಬೀಡಾಗಿ ವೈಭವದಿಂದ ಮೆರೆದಿರುವ ದೇಗುಲಗಳ ಬೀಡು ಗದುಗು. ಈ ಗದುಗಿನ ಹಿನ್ನೆಲೆ, ಸ್ಥಳನಾಮದ ಮಾಹಿತಿ, ದೇಗುಲಗಳ ಮಾಹಿತಿಯನ್ನು ದಿನಾಂಕ ೨೫/೦೪/೧೯೭೧ ರ ಸುಧಾ ವಾರಪತ್ರಿಕೆಯಲ್ಲಿ ಪ್ರಕಟ ಮಾಡಿದ್ದಾರೆ.

* **ಕೆರಿಮನಿಯವರು 'ಯಾತ್ರಿಕ' ದಲ್ಲಿ ೧–೧–೧೯೭೬ ರಲ್ಲಿ ಪ್ರಕಟಿಸಿದ ಬನವಾಸಿ ಕ್ಷೇತ್ರದ ಮಾಹಿತಿ** ಬಂದಿದೆ. ಅವರು ಲೇಖನಕ್ಕೆ ಕೊಟ್ಟ ತಲೆ ಬರಹವು ಆಕರ್ಷಣೀಯವೂ ಅರ್ಥಪೂರ್ಣವೂ ಆಗಿದೆ. ಕರ್ನಾಟಕದ ನಯನವೆನಿಸಿದ ಕ್ಷೇತ್ರ ಬನವಾಸಿ, ಲೇಖಕರು ಇಲ್ಲಿ ಬನವಾಸಿಯ ಐತಿಹಾಸಿಕ ಹಿನ್ನೆಲೆಯನ್ನು ವಿವರಿಸುತ್ತಾ ಮಧುಕೇಶ್ವರ ಶಿವಲಿಂಗದ ಪ್ರಸಿದ್ಧಿಯನ್ನು ತಿಳಿಸುತ್ತಾರೆ.

* ದಾಸಶ್ರೇಷ್ಠ ಕನಕನ ನೆಲೆ ಆದಿಕೇಶವನ ಕಾಗಿನೆಲೆಯ ಕುರಿತ ಕ್ಷೇತ್ರ ಮಾಹಿತಿಯು ದಿನಾಂಕ ೦೨/೦೬/೧೯೭೨ ರ ಸುಧಾ ವಾರಪತ್ರಿಕೆಯಲ್ಲಿ ಬರೆದಿದ್ದು ಪ್ರಕಟಗೊಂಡಿದೆ. ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲೂಕಿನ ಕಾಗಿನೆಲೆಯ ಹೆಸರಿನ ವೈಶಿಷ್ಟ್ಯ, ಖ್ಯಾತ ದೇಗುಲಗಳು, ಉತ್ಸವಗಳು ಮತ್ತು ಶಾಸನಗಳನ್ನು ಕುರಿತು ತಿಳಿಸುತ್ತಾ ದಾಸವರೇಣ್ಯ ಕನಕದಾಸರ ಮಾಹಿತಿಯನ್ನೂ ನೀಡುತ್ತಾರೆ.

ಕರ್ಮಯೋಗಿ ಸಿದ್ಧರಾಮನ ಜನ್ಮಸ್ಥಳವಾಗಿ ಮುಸಲ್ಮಾನರ ಪ್ರಮುಖ ಕೋಟೆಯಾಗಿ ಪೇಶ್ವೆ – ನಿಜಾಮರ ಸಮರಭೂಮಿಯಾಗಿ ಮೆರೆದು ಈಗ ಪ್ರಮುಖ ಔದ್ಯೋಗಿಕ ನಗರವಾಗಿರುವ ಸೊಲ್ಲಾಪೂರದ ಮಾಹಿತಿ ನೀಡುತ್ತಾ ಅದರ ಐತಿಹಾಸಿಕ ಹಿನ್ನೆಲೆಯನ್ನು ವಿವರಿಸಿದ್ದಾರೆ.

ದಿನಾಂಕ : ೨೮/೧೧/೧೯೭೨ ರಲ್ಲಿ ಸುಧಾ ವಾರಪತ್ರಿಕೆಗೆ ಧಾರವಾಡ ಜಿಲ್ಲೆಯ ಕುಂದಗೋಳ ಕುರಿತು ಲೇಖನವನ್ನು ಬರೆದ ಸಿ.ವಿ. ಕೆರಿಮನಿಯವರು ಕುಂದಗೋಳದ ಸ್ಥಳನಾಮವನ್ನು ತಿಳಿಸುತ್ತಾ, ಕುಂದಗೋಳದ ಭೌಗೋಳಿಕ ಸ್ಥಿತಿ–ಗತಿ ಅಂಕಿ – ಅಂಶಗಳ ಸಮೇತ ಹೇಳುತ್ತಾ ಐತಿಹಾಸಿಕ ಚಿತ್ರಣವನ್ನು ದಾಖಲಿಸಿದ್ದಾರೆ. 'ಗಜೇಂದ್ರಗಡದ ಸಿರಿಗಿರಿ' ಎಂಬ ತಲೆಬರಹದ ಲೇಖನವು 'ಗಜೇಂದ್ರಗಡ ಸಿರಿ' ಎಂಬ ಸ್ಮರಣ ಸಂಚಿಕೆಯಲ್ಲಿ ಮೂಡಿಬಂದಿದೆ. ಗಜೇಂದ್ರಗಡದ ಹಿನ್ನೆಲೆ ಅಲ್ಲಿನ ದೇವಾಲಯಗಳ ಮಾಹಿತಿ ತಪೋಧನರ ಸಿದ್ಧಗವಿಯ ಮಾಹಿತಿ ಕೊಡುತ್ತಾ ಅಲ್ಲಿನ ಪ್ರಮುಖ ಕಸುಬುಗಳ ಮಾಹಿತಿ ನೀಡಿದ್ದಾರೆ.

'ಸುಧಾ' ವಾರಪತ್ರಿಕೆಯಲ್ಲಿ ೦೬-೦೮-೧೯೭೨ ರಂದು ಪ್ರಕಟವಾದ ಲೇಖನ 'ಪರಧರ್ಮ ಸಹಿಷ್ಣುತೆಯ ಪುಣ್ಯಭೂಮಿ ನವಿಲುಗುಂದ'. ಸಿ. ವಿ. ಕೆರಿಮನಿಯವರು ಈ ಲೇಖನದಲ್ಲಿ ನವಿಲುಗುಂದದ ಐತಿಹಾಸಿಕ ಹಿನ್ನೆಲೆಯ ಜೊತೆಗೆ ಧಾರ್ಮಿಕ ಕ್ಷೇತ್ರಗಳ ಪರಿಚಯವನ್ನು, ಪರಧರ್ಮ ಸಹಿಷ್ಣುತೆಯ ಅಂಶವನ್ನು ಇಲ್ಲಿ ಉಲ್ಲೇಖಿಸಿದ್ದಾರೆ.

ಸಿ. ವಿ. ಕೆರಿಮನಿಯವರ ಷಷ್ಟ್ಯಪೂರ್ತಿ ಅಭಿನಂದನಾ ಗ್ರಂಥ 'ಚನ್ನಚೇತನ' ೧೯ ನೇ ಫೆಬ್ರವರಿ ೨೦೦೧ ರಂದು ಹೊರಬಂದಿದೆ. ಲಕ್ಷ್ಮೇಶ್ವರದ ಶ್ರೀ ಸೋಮೇಶ್ವರ ಪ್ರಕಾಶನದಲ್ಲಿ ಇದು ಪ್ರಕಟವಾಗಿದೆ. ಸಂಕೀರ್ಣ ಲೇಖನಗಳ ಮಾಲೆಯಲ್ಲಿನ ಮೊದಲ ಅಧ್ಯಾಯದಲ್ಲಿ 'ಭಾರತದ ಗುಹಾಂತರ ದೇವಾಲಗಳು' ಕುರಿತು ಬಂದಿದೆ. ಲೇಖನಗಳನ್ನು ಓದುಗರ ಮನಸೆಳೆಯುವಂತೆ ಬರೆಯುವಲ್ಲಿ ಕೆರಿಮನಿಯವರದು ಸಿದ್ಧಹಸ್ತ. ಅಂತೆಯೇ ಭಾರತದ ಗುಹಾಂತರ ದೇವಾಲಯಗಳು ಲೇಖನದಲ್ಲಿಯೂ ಲೇಖಕರು ವಿವಿಧ ಸೂಕ್ತಿಗಳ ಉಲ್ಲೇಖದಿಂದ ಅಜಂತಾ ಮತ್ತು ಎಲ್ಲೋರಾದ ಗುಹಾಂತರ ದೇವಾಲಯಗಳನ್ನು ಕನ್ಹೇರಿ, ಜೋಗೇಶ್ವರಿ, ಬಾದಾಮಿ ಮತ್ತು ಐಹೊಳೆ ಗುಹಾಂತರ ದೇವಾಲಯಗಳ ಕುರಿತ ಮಾಹಿತಿ ವಿಶಿಷ್ಟತೆಯಿಂದ ಮೂಡಿ ಬಂದಿದೆ. ಈ ಗುಹಾಂತರ ದೇವಾಲಯಗಳ ಮಹತ್ವ ತಿಳಿಸುತ್ತಾ ಅವುಗಳ ಬಗೆಗೆ ಭಾರತೀಯರ ನಿರ್ಲಕ್ಷ್ಯಭಾವ ಮತ್ತು ವಿದೇಶಿಯರ ಆಸಕ್ತಿ ಮನೋಭಾವನೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದ್ದಾರೆ. ಅವುಗಳ ರಕ್ಷಣೆಗೆ ಮಹತ್ವದ ಕಾಳಜಿ ಅವಶ್ಯಕತೆಯನ್ನು ಲೇಖಕರು ಬಯಸಿದ್ದಾರೆ.

## ಸಿ. ವಿ. ಕೆರಿಮನಿಯವರ ಕ್ಷೇತ್ರವಾರು ಸಂಶೋಧನೆಗಳ ವಿಶಿಷ್ಟತೆಗಳು

- ಕೆರಿಮನಿಯವರಿಗೆ ಅಪಾರವಾದ ಐತಿಹಾಸಿಕ ಮಾಹಿತಿ ಇದ್ದು ಅದಕ್ಕೆ ಸಾಹಿತ್ಯದ ಕಂಪನ್ನು ಬೆರೆಸಿ ಓದುಗರ ಮನಸೆಳೆಯುವಲ್ಲಿ ಯಶಸ್ಸು ಕಂಡಿದ್ದಾರೆ

- ಗಾದೆ ಮಾತುಗಳ ಸೊಗಡು, ಸಂಸ್ಕೃತಿ ಸೂಕ್ತಿಗಳನ್ನು ಹಳಗನ್ನಡ ಪದ್ಯಗಳನ್ನು ನಡುನಡುವೆ ಸಮೀಕರಿಸಿ ವಿಷಯ ವಿಶ್ಲೇಷಿಸುವ ಜಾಣ್ಮೆ ತೋರಿದ್ದಾರೆ.

- ಕೆರಿಮನಿಯವರು ಪ್ರಸಿದ್ದ ಕ್ಷೇತ್ರಗಳಿಗೆ ತೋರುವ ಉತ್ಸಾಹ ಕಾಳಜಿ, ಅಷ್ಟೇನೂ ಪ್ರಸಿದ್ಧವಲ್ಲದ ಕ್ಷೇತ್ರಗಳ ಪರಿಚಯ ಮಾಡುವಾಗಲೂ ತೋರಿರುವದು ಅವರ ಕುಂದದ ಉತ್ಸಾಹದ ಪ್ರತೀಕವಾಗಿದೆ. ಜೊತೆಗೆ ಅಪರಿಚಿತ ಕ್ಷೇತ್ರಗಳನ್ನು ಮಾಹಿತಿಯ ಕೊರತೆಯ ತಾಣಗಳ ಮಾಹಿತಿಯನ್ನು ಕಲೆ ಹಾಕಿ ವ್ಯವಸ್ಥಿತ ರೀತಿಯಲ್ಲಿ ನಿರೂಪಿಸುವ ಉಪಕಾರ ಮಾಡಿದ್ದಾರೆ.

- ಕೆರಿಮನಿಯವರ ಲೇಖನಗಳು ನಮ್ಮ ಕಲೆ, ಸಾಹಿತ್ಯ, ಸಂಸ್ಕೃತಿ, ಪರಿಸರ, ಮುಂತಾದ ಅಂಶಗಳನ್ನು ಆತ್ಮೀಯತೆಯಿಂದ ತಿಳಿ ಹೇಳುವ ಮಿತ್ರನಂತಿವೆ.

## ೩.೨ ಸಾಂಸ್ಕೃತಿಕ ಹಾಗೂ ಧಾರ್ಮಿಕ ಕ್ಷೇತ್ರಗಳಿಗೆ ಸಂಬಂಧಿಸಿದ ಸಂಶೋಧನೆಗಳು :

ಭಯ, ಅಶಾಂತಿ, ನಿರಾಸೆ, ಉನ್ಮಾದ ಮೊದಲಾದ ತರತರಹದ ವಿಪತ್ತುಗಳಿಂದ ನವೆಯುತ್ತಿರುವವನಿಗೆ ಭೌತಿಕವಾದ ಯಾವ ಮದ್ದು ನಾಟದು; ಪಥ್ಯ ರುಚಿಸದು, ಆತನಿಗೆ ಬೇಕಾದುದು ಶಾಂತಿ, ಅವನ ನೊಂದ ಮನಸ್ಸಿಗೆ ಶಾಂತಿಯೇ ಅಮೃತ. ಆ ಅಮೃತದ ನಿಧಿಗಳೇ ಶ್ರೀ ಕ್ಷೇತ್ರಗಳು. ಅಶಾಂತಿಯ ಬೇಗೆಯಿಂದ ಬಳಲುವ ಮನಷ್ಯನಿಗೆ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಬೇಕೆಂಬ ಸದ್ಭಾವನೆ ಎಂದು ತನ್ನಲ್ಲೇ ಹುಟ್ಟುವುದೋ ಅಂದಿನಿಂದ ಆತನ ಜೀವನದಲ್ಲಿ ಗೆಲುವು ಎದ್ದು ಕಾಣುವುದು. ಆತ ಶಾಂತಿಯನ್ನಾಧರಿಸಿ ಏಕಮನಸ್ಸಿನಿಂದ ಶ್ರೀ ದೇವರಲ್ಲಿ ಅನನ್ಯ ಭಕ್ತಿಯನ್ನಿಟ್ಟು, ಭಗವತ್ಕೃಪೆಗೆ ಪಾತ್ರನಾಗಿ ಪುನೀತನಾಗುತ್ತಾನೆ. ಆತನ ಸಕಲ ಸಂಕಷ್ಟಗಳು ತನ್ನಿಂದ ತಾನೇ ಪರಿಹಾರವಾಗುವವು. ಈ ರೀತಿ ಸಿ. ವಿ. ಕೆರಿಮನಿಯವರು ದೈವಿ ಪರಿಕಲ್ಪನೆಯನ್ನು ಕುರಿತು ವಿಶ್ಲೇಷಿಸುತ್ತಾರೆ.

ಹಿಂದೂ ಸಂಸ್ಕೃತಿಯ ಪರಂಪರೆಯಲ್ಲಿ ಪುಣ್ಯ ಕ್ಷೇತ್ರಗಳೇ ನೆಲೆಸಿದ್ದು ಹೊಳೆಹಳ್ಳ ಮತ್ತು ಜಲಾಶಯಗಳ ದಡದಲ್ಲಿ. ಒಂದು ಕಾಲದಲ್ಲಿ ಆ ಸ್ಥಳವು ಯೋಗಿಗಳ, ತಪಸ್ವಿಗಳ, ಸಾಧುಸಿದ್ಧರ ಜಪತಪ ಧ್ಯಾನಗೈದ ಪವಿತ್ರ ಸ್ಥಳವೇ ಪುಣ್ಯಭೂಮಿಯ ಜಾಗೃತಿ ಧರ್ಮಕ್ಷೇತ್ರ ಸ್ಥಳವಾಗಿರುತ್ತದೆ. ಆ ರೀತಿ ಮಾನಸಿಕ ನೆಮ್ಮದಿಯ ತಾಣಗಳಿಂದ ಧಾರ್ಮಿಕ ಕ್ಷೇತ್ರಗಳಿಗೆ ಸಂಬಂಧಿಸಿದ ಸಂಶೋಧನಾ ಲೇಖನಗಳು ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿನ ಸಂಶೋಧನೆಗಳು ಮಹತ್ವದ್ದಾಗಿವೆ.

ಉದಾಹರಣೆಗೆ ದಿನಾಂಕ ೧೦-೦೪-೧೯೯೪ ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದ ಸಂಶೋಧನಾ ಲೇಖನ. ಲಕ್ಷ್ಮೇಶ್ವರದ ಶಿರಸು ಪವಾಡಮಠದ ಮೂಲ ಪುರುಷರಾದ ಶ್ರೀ ಲಿಂಬಯ್ಯಸ್ವಾಮಿಗಳ ಕುರಿತು ಮಾಹಿತಿಯನ್ನು ಪವಾಡಗಳನ್ನು ಕುರಿತು ತಿಳಿಸಿದ್ದಾರೆ.

ಅದೇ ರೀತಿಯಾಗಿ ವೀರನಾರಾಯಣನ ಊರು, ಶಿಲ್ಪಕಲೆಗಳ ಬಿಡು-ಗದಗು ಎಂಬ ತಲೆಬರಹದಡಿಯಲ್ಲಿ ಸುಧಾ ವಾರಪತ್ರಿಕೆಗೆ ದಿನಾಂಕ ೨೫-೦೪-೧೯೭೧ ರಲ್ಲಿ ಸಂಶೋಧನಾ ಲೇಖನ ಪ್ರಕಟಿಸಿದ್ದಾರೆ. ಗದಗ ಎಂಬ ಹೆಸರು ರೂಪಗೊಂಡ ಬಗೆಯಿಂದ ಹಿಡಿದ ಅದರ ಸುತ್ತಮುತ್ತಲಿನ ವೀರಗಲ್ಲುಗಳ ಮಾಹಿತಿ ಕೊಟ್ಟಿದ್ದಾರೆ. ಗದಗಿನ ಮುಖ್ಯ ದೇವಾಲಯಗಳ ಪರಿಚಯ ಮಾಡುತ್ತಾ, ದೇಗುಲಗಳಲ್ಲಿನ ಶಾಸನಗಳು, ಬಾವಿಗಳು ಇರುವ ಬಗ್ಗೆ ತಿಳಿಸಿದ್ದಾರೆ. ಸಾಂಸ್ಕೃತಿಕವಾಗಿ ಹಾಗೂ ಧಾರ್ಮಿಕವಾಗಿ ಹಿಂದಿನ ವೈಭವವನ್ನೇ ತೋಂಟದಾರ್ಯಮಠ, ಶಿವಾನಂದಮಠ, ಪಂಚಾಕ್ಷರಿ ಗವಾಯಿಗಳ ಮಂದಿರ ಮುಂತಾದವು ಧರ್ಮಜಾಗೃತಿಯ ಕೇಂದ್ರಗಳಾಗಿ ಇಂದಿಗೂ ಮೆರೆಯುತ್ತಿರುವುದನ್ನು ತಮ್ಮ ಲೇಖನದಲ್ಲಿ ಸ್ಮರಿಸಿದ್ದಾರೆ.

ಬನವಾಸಿ ಸಿ. ವಿ. ಕೆರಿಮನಿಯವರಿಗೆ ವಿಶಿಷ್ಟಮಯವಾಗಿ ಕಂಡಿದೆ. ಅದು ಕರ್ನಾಟಕ ನಯನವೆನಿಸಿದೆ. ಇವರು ಪ್ರವಾಸವನ್ನು ಒಬ್ಬ ಸಂಶೋಧಕನ ದೃಷ್ಟಿಯಲ್ಲಿ ಸೆರೆಹಿಡಿದು, ಮಾಹಿತಿ ಕಲೆಹಾಕಿ ತಮ್ಮ ವಿಶಿಷ್ಟ ಪದಗಳಲ್ಲಿ ಬಣ್ಣಿಸುವ ಸಿದ್ಧಿಪಡೆದವರು. ಭೌಗೋಳಿಕ ಪ್ರಜ್ಞೆ, ಐತಿಹಾಸಿಕ ಪ್ರಜ್ಞೆಯ ವಿಶಿಷ್ಟ ಜ್ಞಾನ ಇವರ ಲೇಖನಗಳಲ್ಲಿ ಹೇರಳವಾಗಿ ಕಂಡುಬರುತ್ತದೆ. ಅತ್ಯಂತ ಪ್ರಸಿದ್ಧವಾದ ಮಧುಕೇಶ್ವರ ಶಿವಲಿಂಗದ ಇತಿಹಾಸವನ್ನು ಮತ್ತು ಅದನ್ನು ಆರಾಧಿಸುತ್ತ ಬಂದ ರಾಜಪರಂಪರೆಯನ್ನು ಮತ್ತು ದೇವಾಲಯದ ವಾಸ್ತುಶಿಲ್ಪವನ್ನು ಆಸಕ್ತಿ ಬರುವಂತೆ ಸವಿವರವಾಗಿ ವಿವರಿಸಿದ್ದಾರೆ. ಆ ದೇವಾಲಯ ಶಿಲ್ಪ ಕಲಾ ಕೃತಿಯಿಂದೊಡಗೂಡಿದ ಒಂದು ಪುಟ್ಟ ಸಂಗ್ರಹಾಲಯ ಎಂದಿದ್ದಾರೆ. ಬನವಾಸಿಯಲ್ಲಿ ಅಲಂಕಾರಗಳಿಂದೊಡಗೂಡಿದ ಶಾರದೆಯ ಸೌಮ್ಯಕಳೆಯ ವಿಗ್ರಹವೂ ಸುಂದರವಾಗಿದೆ ಎಂದಿದ್ದಾರೆ. ಇಂತಹ ಅಭಿಪ್ರಾಯಗಳನ್ನು ಗಮನಿಸಿದಾಗ ನಮಗೆ ಗೋಚರಿಸುವ ಸಂಗತಿ ಎಂದರೆ ಸಿ. ವಿ. ಕೆರಿಮನಿಯವರು ಪ್ರತಿ ಚಿಕ್ಕಕಲಾಕೃತಿಗಳನ್ನು ಅಪಾರ ಆಸಕ್ತಿಯಿಂದ ಗಮನಿಸಿರುವುದು ತಿಳಿಯುತ್ತದೆ.

ದಿನಾಂಕ ೦೨-೦೬-೧೯೭೨ ರಂದು ಸುಧಾ ವಾರಪತ್ರಿಕೆಯಲ್ಲಿ 'ದಾಸಶ್ರೇಷ್ಠ ಕನಕನ ನೆಲೆ ಆದಿಕೇಶವನ ಕಾಗಿನೆಲೆ' ಎಂಬ ಲೇಖನ ಪ್ರಕಟಗೊಂಡಿದೆ. ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲೂಕಿನ ಕಾಗಿನೆಲೆಯ ಕುರಿತು ಸಿ. ವಿ. ಕೆರಿಮನಿಯವರ ನೀಡುವ ಆರಂಭದ ಸಾಲುಗಳು ಕಾಗಿನೆಲೆಯನ್ನು ಹೇಗೆ ಸೊಗಸಾಗಿ ಪರಿಚಯಿಸುತ್ತವೆ ನೋಡಿರಿ.

> **"ದಾಸಶ್ರೇಷ್ಠ ಕನಕದಾಸರು ಬಾಳಿ ಬದುಕಿದ, ಆದಿಕೇಶವನ**
> **ನೆಲೆಯಾಗಿರುವ, ಚಾಳುಕ್ಯ, ಯಾದವ ವಿಜಯನಗರ ಅರಸರು**
> **ಆಳಿದ, ವೀರರು ಮಹಾಸತಿಯರ ತೌರಾದ, ವಿದ್ಯೆ,**
> **ದಾನ-ಧರ್ಮಗಳಿಗೆ ಹೆಸರಾದ ಕಾಗಿನೆಲೆ, ಇಂದಿಗೂ ಸತ್ವ**
> **ಪರಂಪರೆಯನ್ನು ಉಳಿಸಿಕೊಂಡು ಬಂದಿದೆ.................."**

ಕಾಗಿನೆಲೆಯ ಖ್ಯಾತ-ದೇಗುಲಗಳು, ಉತ್ಸವಗಳನ್ನು ಹಾಗೂ ಶಾಸನಗಳನ್ನು ಕುರಿತು ತಿಳಿಸಿದ್ದಾರೆ. ಜೊತೆಗೆ ಕನಕದಾಸರ ಸಂಕ್ಷಿಪ್ತ ಪರಿಚಯವೂ ಇಲ್ಲಿದೆ.

ಹಾಗೆಯೇ ಗದಗ ಜಿಲ್ಲೆಯ ಸುಪ್ರಸಿದ್ಧ ಐತಿಹಾಸಿಕ ನಾಡು 'ಡಂಬಳ'ದ ಕುರಿತು ದಿನಾಂಕ ೦೧-೦೪-೧೯೭೮ ರಲ್ಲಿ 'ಯಾತ್ರಿಕ'ದಲ್ಲಿ ಸಂಶೋಧನಾ ಲೇಖನ ಪ್ರಕಟಗೊಂಡಿದೆ. ಅದಕ್ಕೆ ಸರ್ವಧರ್ಮಗಳ ಸಂಗಮ; ಡಂಬಳ ಎಂಬ ಹೆಸರೇ ಓದುಗನನ್ನು ಸೆಳೆಯುವಂತಿದೆ. ಡಂಬಳದ ಐತಿಹಾಸಿಕ ವಿವರವನ್ನು ನೀಡುತ್ತಾ ಶಾಸನದಲ್ಲಿನ ಸಾಲುಗಳನ್ನು ಉಲ್ಲೇಖಿಸುತ್ತಾ ಲೇಖನ ಮುಂದುವರೆಯುತ್ತದೆ. ಡಂಬಳದಲ್ಲಿರುವ ನಕ್ಷತ್ರಾಕಾರದ ದೊಡ್ಡ ಬಸಪ್ಪನ ಗುಡಿಯ ಮಾಹಿತಿ ನೀಡುತ್ತಾ, ಡಂಬಳದ ಪಶ್ಚಿಮ ಭಾಗದಲ್ಲಿನ

ಒಂದು ಹಾಳುಬಿದ್ದ ಕೋಟೆಯನ್ನು ಕುರಿತು ನಮಗೆ ತಿಳಿಸುತ್ತಾರೆ. ನಂತರ ಶ್ರೀ ತೋಂಟದ ಸ್ವಾಮಿ ಮಠದ ಕುರಿತು ಉಲ್ಲೇಖಿಸಿದ್ದಾರೆ. ಇಲ್ಲಿನ ಮಠಗಳ ಧಾರ್ಮಿಕವಾಗಿ ಸಲ್ಲಿಸಿದ ಮತ್ತು ಸದ್ಯ ಕೂಡ ಸಲ್ಲಿಸುತ್ತಿರುವ ಅಮೂಲ್ಯ ಸೇವೆಯನ್ನು ಲೇಖಕರು ಸ್ಮರಿಸಿದ್ದಾರೆ. ಜೊತೆಗೆ ಅಲ್ಲಿನ ಬೆಳೆಗಳ ಕುರಿತು ಮಾಹಿತಿಯನ್ನು ಕೊಟ್ಟಿದ್ದಾರೆ.

ಸಿ. ವಿ. ಕೆರಿಮನಿಯವರು ಸವದತ್ತಿಯ ಶ್ರೀ ರೇಣುಕಾ ಎಲ್ಲಮ್ಮ ದೇವಸ್ಥಾನ ಕುರಿತು ತಮ್ಮ ಲೇಖನವನ್ನು 'ಕರ್ಮವೀರ' ವಾರಪತ್ರಿಕೆಯಲ್ಲಿ ದಿನಾಂಕ ೧೧-೦೩-೧೯೭೩ ರಂದು ಪ್ರಕಟಗೊಂಡಿದೆ. ಜಗದಂಬೆ ಮಹಾಶಕ್ತಿಯಾಗಿ ಭಕ್ತರ ಉದ್ಧಾರಿಣಿಯಾಗಿ ಸಕಲರ ಇಷ್ಟಾರ್ಥವನ್ನು ಪೂರೈಸುವ ದೇವತೆಯನ್ನು ಲೇಖಕರು ಭಕ್ತಿಭಾವಗಳಿಂದ ನೆನೆದಿದ್ದಾರೆ.

**'ತ್ರೇತಾಯುಂ ಜಮದಗ್ನೆ' : ಎಂಬ ಉಲ್ಲೇಖವನ್ನು ಅವಲೋಕಿಸಿದರೆ** ತ್ರೇತಾಯುಗದಲ್ಲಿ ಜಮದಗ್ನಿ ಋಷಿಯು ಬಾಳಿದ ಕಾಲವಾಗುತ್ತದೆ. ಅವನ ಧರ್ಮಪತ್ನಿಯಾದ ಶ್ರೀ ಎಲ್ಲಮ್ಮ ದೇವಿಯು ಕಾಲವೂ ಅದೇ ಆಗಿರಬೇಕು ಎಂದು ನಿರ್ಣಯಿಸುವ ಲೇಖಕರು, ಓದುಗರನ್ನು ತರ್ಕಕ್ಕೆ ಬಿಡುತ್ತಾರೆ. ಶ್ರೀ ರೇಣುಕಾದೇವಿ ಮಂದಿರದ ಕುರಿತು, ಶಿಲ್ಪದ ಕುರಿತು, ವಾಸ್ತುಶಿಲ್ಪದ ಕುರಿತು, ಪೂಜಾ ವಿಧಿ-ವಿಧಾನಗಳನ್ನು ಕುರಿತಾಗಿ, ಜೋಗತಿಯರ ಕುರಿತು ವ್ಯವಸ್ಥಿತ ಮಾಹಿತಿ ನೀಡುತ್ತಾರೆ. ಹಾಗೆಯೇ ಪರಶುರಾಮ ಮಂದಿರದ ಕುರಿತು ಎಳೆಎಳೆಯಾಗಿ ತಿಳಿಸಿದ್ದಾರೆ.

ದಿನಾಂಕ ೦೧-೦೩-೧೯೮೧ ರಂದು 'ಯಾತ್ರಿಕ'ದಲ್ಲಿ ಪ್ರಕಟವಾದ ಸಂಶೋಧನಾ ಬರಹ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಶ್ರೀ ಹೊಳಲಮ್ಮದೇವಿ ಕ್ಷೇತ್ರದ ಕುರಿತು ಬರೆದಿದ್ದಾರೆ. ಇದಕ್ಕೆ ಶ್ರೀಮಂತಗಡ ಎಂಬ ಇನ್ನೊಂದು ಹೆಸರಿದೆ. ಈ ದೇವಸ್ಥಾನ ಕ್ರಿ.ಶ. ೧೬೦೬ ರಲ್ಲಿ ಆಗಿರುವುದನ್ನು ಚನ್ನ ಕವಿಗಳ ಶ್ರೀ ಫಕೀರೇಶ್ವರ ಪುರಾಣದಿಂದ ತಿಳಿಯುತ್ತದೆ ಎಂಬ ಅಂಶವನ್ನು ತಿಳಿಸುತ್ತಾ ದೇವಾಲಯದ ಪ್ರತಿಯೊಂದು ಮಾಹಿತಿಯನ್ನು ಅಚ್ಚುಕಟ್ಟಾಗಿ ನೀಡಿದ್ದಾರೆ.

ದಿನಾಂಕ ೦೨-೦೭-೧೯೭೨ ರಂದು ಕರ್ಮವೀರ ವಾರಪತ್ರಿಕೆಯಲ್ಲಿ ಪ್ರಕಟವಾದ ಲೇಖನ ಗದಗ ಜಿಲ್ಲೆಯ ಜಾಗೃತ-ಧರ್ಮಕ್ಷೇತ್ರವಾದ ವೆಂಕಟಾಪುರದ ಶ್ರೀ ವೆಂಕಟೇಶನ ಕುರಿತು ಬರೆದಿದ್ದಾರೆ. ಆಂಧ್ರ ಪ್ರದೇಶದ ತಿರುಪತಿ ವೆಂಕಟರಮಣನ ಪ್ರತಿರೂಪ ಉದ್ಭವಗೊಂಡಿರುವ ಈ ಸ್ಥಳ ವೆಂಕಟಾಪುರವೆಂಬ ಸಾರ್ಥಕ ನಾಮದಿಂದ ಹೆಸರಾಗಿದೆ ಎಂಬ ವಿಷಯ ತಿಳಿಸಿದ ಲೇಖಕರು, ಆ ಕಾರಣದಿಂದಾಗಿಯೇ ಈ ಲೇಖನಕ್ಕೆ 'ಕರ್ನಾಟಕ ತಿರುಪತಿ ತಿಮ್ಮಪ್ಪ ವೆಂಕಟಾಪುರದ ಶ್ರೀ ವೆಂಕಟೇಶ' ಎಂಬ ತಲೆಬರಹ ನೀಡಿದ್ದು ವಿಶಿಷ್ಟವಾಗಿದೆ.

ಶ್ರೀ ವೆಂಕಟೇಶನ 'ಸ್ವಯಂಭೂ' ಸೃಷ್ಟಿಯನ್ನು ರೋಚಕವಾಗಿ ಈ ಲೇಖನದಲ್ಲಿ ವಿವರಿಸಿದ್ದಾರೆ. ಹಾಗೆಯೇ 'ಕರ್ಮವೀರ' ವಾರಪತ್ರಿಕೆಯಲ್ಲಿ ದಿನಾಂಕ ೨೬-೦೩-೧೯೭೨ ರಂದು ಪ್ರಕೃತಿ ಮಡಿಲಲ್ಲಿ ನಿಂತಿರುವ 'ಕಾರಡಗಿ ವೀರಭದ್ರ ದೇವರು' ಎಂಬ ಲೇಖನವನ್ನು ಇವರು ಪ್ರಕಟಿಸಿದ್ದಾರೆ. ಕಾರಡಗಿ ಧರ್ಮಕ್ಷೇತ್ರವು ಹಾವೇರಿ ಜಿಲ್ಲೆಯ ಸವಣೂರು ತಾಲೂಕಿನ ಒಂದು ಪ್ರಮುಖ ಸ್ಥಳವಾಗಿದೆ. ಲೇಖಕರು ಈ ಸ್ಥಳದ ಮಹಾತ್ಮೆಯನ್ನು ತಿಳಿಸಿದ್ದಾರೆ. ಭೈರವ ವೀರಮೂರ್ತಿ ಕುರಿತಾಗಿ ಹಾಗೂ ದೊಡ್ಡ ಜಾತ್ರೆಯ ಕುರಿತಾಗಿ ಉಲ್ಲೇಖಿಸಿದ್ದಾರೆ.

ಒಟ್ಟಾರೆಯಾಗಿ ಸಿ. ವಿ. ಕೆರಿಮನಿಯವರ ಸಾಂಸ್ಕೃತಿಕ ಮತ್ತು ಧಾರ್ಮಿಕ ಕ್ಷೇತ್ರಗಳಿಗೆ ಸಂಬಂಧಿಸಿದ ಲೇಖನಗಳು ಓದುಗರನ್ನು ಕುಳಿತಲ್ಲಿಯೇ ಕ್ಷೇತ್ರದರ್ಶನ ಮಾಡಿಸಿದ ಅಪೂರ್ವ ಬರಹಗಳಾಗಿವೆ. ಈ ಬರವಣಿಗೆಯಲ್ಲಿ ಅವರ ಸಂಶೋಧನಾ ದೃಷ್ಟಿ, ಅಧ್ಯಯನದ ಆಳ ಮತ್ತು ಕಂಡದ್ದನ್ನು ತಮ್ಮ ಪದಗಳಲ್ಲಿ ಸೊಗಸಾಗಿ ಹಿಡಿದಿಡುವ ಶಕ್ತಿಯ ಪರಿಚಯ ನಮನಾಗುತ್ತದೆ.

## ೩.೩ ಸಾಹಿತ್ಯ ಸಂಶೋಧನೆಗಳು :

ಸಿ. ವಿ. ಕೆರಿಮನಿಯವರು ಸಾಹಿತ್ಯಿಕವಾಗಿ ಕೆಲವು ಮಾಹಿತಿಗಳನ್ನು ತಮ್ಮ ಸಾಹಿತ್ಯಿಕ ಕಣಜದಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ.

'ಶರಣ ಸಾಹಿತ್ಯದಲ್ಲಿ ಮಹಿಳಾದರ್ಶನ' ಎಂಬ ಲೇಖನವು 'ಶ್ರೀ ದರ್ಶನ ಭಾರತಿ', ಇಂಚಲ ಇಲ್ಲಿ ಪ್ರಕಟಗೊಂಡಿದೆ. ಹನ್ನೆರಡನೆಯ ಶತಮಾನದ ಶಿವಶರಣರ ಸಾಂಸ್ಕೃತಿಕ ಆಂದೋಲನದಲ್ಲಿ ಭಾಗವಹಿಸಿದ್ದ ಅಸಂಖ್ಯಾತ ಶಿವಶರಣೆಯರ ಕುರಿತು ಸ್ಮರಿಸಿದ ಲೇಖಕರು, ವಿವಿಧ ವೃತ್ತಿಯ ಶಿವಶರಣೆಯರು ತಮ್ಮ ಸ್ವಂತಿಕೆಯನ್ನು, ಜ್ಞಾನದ, ಅನುಭಾವದ ಆಳವನ್ನು ತಮ್ಮ ಸಾವಿರಾರು ವಚನಗಳಲ್ಲಿ ವ್ಯಕ್ತಪಡಿಸಿದ್ದನ್ನು ಸ್ಮರಿಸಿದ್ದಾರೆ. ಸುಮಾರು ೮೦೦ ವರ್ಷಗಳಷ್ಟು ಹಿಂದೆಯೇ ವಚನಕಾರರು ಸ್ತ್ರೀ ಸಮಾನತೆಯನ್ನು ಎತ್ತಿ ಹಿಡಿದಿದ್ದು ಜಾಗತಿಕ ದಾಖಲೆಯೇ ಸರಿ. ಅಂತೆಯೇ ಆ ವಿಶಿಷ್ಟ್ಯತೆಯಿಂದ, ಮಾದರಿ ಜೀವನ ನಡೆಸಿದ ಕೆಲವು ವಚನಕಾರ್ತಿಯರ ಸಾಧನೆಯನ್ನು ಲೇಖಕರು ಸ್ಮರಿಸಿದ್ದಾರೆ. ಶರಣೆಯರನ್ನೇ ಕೇಂದ್ರವಾಗಿಟ್ಟುಕೊಂಡು ಪ್ರಸ್ತುತ ಲೇಖನ ರಚಿತವಾಗಿರುವುದು ಕಂಡುಬರುತ್ತದೆ.

ಶರಣೆ ನೀಲಲೋಚನೆ, ಶರಣೆ ಮೋಳಿಗೆಯ ಮಹಾದೇವಿಯಕ್ಕ, ಶರಣೆ ಮುಕ್ತಾಯಕ್ಕ, ಶರಣೆ ಲಿಂಗಮ್ಮ, ಶರಣೆ ರಾಯಮ್ಮ, ಶರಣೆ ಅಕ್ಕಮ್ಮ, ಶರಣೆ ಆಯ್ದಕ್ಕಿ ಲಕ್ಕಮ್ಮ, ಶರಣೆ ಅಕ್ಕ ನಾಗಮ್ಮ, ಶರಣೆ ಗಂಗಾಂಬಿಕೆ, ಶರಣೆ ಸತ್ಯಕ್ಕ, ಶರಣೆ ಮಹಾದೇವಿಯಕ್ಕ ಹೀಗೆ ಮುಂತಾದ ಶಿವಶರಣೆಯರ ಕುರಿತು ವ್ಯವಸ್ಥಿತವಾಗಿ ವಿಶಿಷ್ಟವಾಗಿ ಲೇಖಕರು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

ಪೂರ್ವ ಕಾಲದಲ್ಲಿದ್ದ ಸ್ತ್ರೀಯರಿಗಿರುವ ಕೀಳು ಎಂಬ ಸಾಮಾಜಿಕ ಕಲ್ಪನೆಯನ್ನು ವಚನಕಾರ್ತಿಯರು ಪ್ರಶ್ನಿಸಿ ತಾನು ಪುರುಷನಷ್ಟೇ ಸಮಾನಳು ಎಂಬುದನ್ನು ಆಯಾ ವಚನಕಾರ್ತಿಯರ ವಚನಗಳನ್ನು ಉದಾಹರಿಸುತ್ತಾ ತೌಲನಿಕವಾಗಿ ಹಿಡಿದಿಟ್ಟಿದ್ದಾರೆ.

ಉದಾಹರಣೆಗೆ ಶರಣೆ ನೀಲಲೋಚನೆಯ ಈ ವಚನವನ್ನು ನೋಡಬಹುದು.

**"ಮಡದಿ ಎನಲಾಗದು ಬಸವಂಗೆ ಎನ್ನನು**
**ಪುರುಷವೆನ್ನಲಾಗದು ಬಸವನು ಎನಗೆ**
**ಸಂಗಯ್ಯನಿಕ್ಕದ ದಿಬ್ಯವ ಮೀರದೆ ಬಸವನೊಳಗಾನಡಗಿದೆ............."**

ನೀಲಮ್ಮ ಬಸವಣ್ಣನ ಧರ್ಮಪತ್ನಿ, ಮಹಾತ್ಮ ಬಸವಣ್ಣನನ್ನು ಕೈಹಿಡಿದು ಲೌಕಿಕವನ್ನು ಮೀರಿ ದಿವ್ಯಕ್ಕೆ ಒಡ್ಡಿ ಪುಟಗೊಂಡು ಪವಿತ್ರವಾದ ತನ್ನ ಜೀವನದ ನಿಲುವನ್ನು ಸ್ಪಷ್ಟಪಡಿಸುತ್ತಾಳೆ ಇಲ್ಲಿ. ವಚನಕಾರ್ತಿಯರಿಗೆ ಪುರುಷ ಸಾಧನೆಯ ಬಗ್ಗೆ ಗೌರವವಿದೆ. ಜಗತ್ತಿನ ಇತಿಹಾಸದಲ್ಲಿ ಪುರುಷ ಅವನು ಸಾಧಿಸಿದ ಔನ್ನತ್ಯ ಸಾಮಾನ್ಯವಾದುದಲ್ಲ. ಅವನ ಪ್ರಗತಿಗೊಂದು ಮಹತ್ವ ಇರುವುದನ್ನು ಅವರು ಒಪ್ಪಿಕೊಂಡಿದ್ದಾರೆ. ಸ್ತ್ರೀ–ಸಾಧನೆ ಅದರ ಅನುಸರಣಿಯಲ್ಲಿ ಸಾಗಿದೆ ಎಂಬ ಅರಿವು ಸೌಜನ್ಯಗಳು ಅವರಲ್ಲಿವೆ. ಹೀಗೆ ನಿರೂಪಿಸುತ್ತಾ ಸಾಗುವ ಲೇಖಕರು ಇದನ್ನು ಮೊಳಿಗೆ ರಾಣಿ ಮಹಾದೇವಿಯಕ್ಕನ ವಚನಗಳಲ್ಲಿ ಕಾಣಬಹುದು ಎಂದಿದ್ದಾರೆ. ಸಾಧನೆಯಲ್ಲಿ ಸ್ತ್ರೀ–ಪುರುಷರಿಬ್ಬರಿಗೆ ಪೌರುಷವೇ ಪ್ರಧಾನ. ಆ ಮಾತನ್ನು ಮಹಾದೇವಿಯಕ್ಕನ ವಚನವೊಂದು ಹೀಗೆ ಸ್ಪಷ್ಟಪಡಿಸುತ್ತದೆ.

**"ಆಳುತನದ ಮಾತನೇರಿಸಿ ನುಡಿದಡೆ**
**ಆಗಳೆ ಕಟ್ಟಿದೆನು ಗಂಡುಗಚ್ಚೆಯ**
**ತಿರುಗನೇರಿಸಿ ತಿಲಕವನಿಟ್ಟು**
**ಕೈದುವಕೊಂಡು ಕಳನೇರಿದ ಬಳಿಕ**
**ಕಟ್ಟಿದ ನಿರಿ ಸಡಲಿಸದೆ ಇನ್ನು ನಿಮ್ಮಾಣೆ..................!"**

ಈ ರೀತಿಯಲ್ಲಿ ವಚನವನ್ನು ಆಯ್ದು ಉಲ್ಲೇಖಿಸಿದ ಲೇಖಕರು ಪೌರುಷವೆಂಬುದು ಸಾಧನೆಗೆ ಬೇಕಾದ ಸಮಗ್ರತೆಯ ಧ್ಯೋತಕವೇ ಹೊರತು, ಅದು ಕೇವಲ ಗಂಡನಿಗಾಗಿ ಬಳಸಿದ ಪದವಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಒಟ್ಟಾರೆಯಾಗಿ ವಿವಿಧ ಶರಣೆಯರ ವಚನಗಳನ್ನು ಆಯ್ದು ಮಾಡಿದ ಮಹಿಳಾದರ್ಶನವು ಲೇಖಕರ ಓದಿನ ಆಳ ವಿಸ್ತಾರವನ್ನು, ಅರ್ಥವೈಚಿತ್ರ್ಯವನ್ನು ಬಿಡಿಸಿ ಹೇಳುವ ಕುಶಲತೆಯನ್ನು ನಾವಿಲ್ಲಿ ಗುರುತಿಸಬಹುದು. ಜೊತೆಗೆ ಸ್ತ್ರೀಯರ ಕುರಿತ ಅಪಾರವಾದ ಗೌರವವನ್ನು ನಾವಿಲ್ಲಿ ಗಮನಿಸಬಹುದು.

೧೯೯೨ ರಲ್ಲಿ 'ಶಿಕ್ಷಣ ಪ್ರದೀಪ'ದಲ್ಲಿ ಕನಕದಾಸರ 'ರಾಮಧಾನ್ಯ ಚರಿತೆ' ಎಂಬ ಲೇಖನ ಪ್ರಕಟಗೊಂಡಿದೆ. ಇದರಲ್ಲಿ ೧೫ನೇ ಶತಮಾನದಲ್ಲಿ ದಾಸರ ಕೀರ್ತನೆಗಳು ಭಾಗವತ ಧರ್ಮ ಪ್ರಚಾರಕ್ಕಾಗಿ ಹುಟ್ಟಿಕೊಂಡರೂ ಇವು ಕೂಡಾ ಸಾಹಿತ್ಯದಲ್ಲಿ ನವೀನ ಕ್ರಾಂತಿಯನ್ನುಂಟು ಮಾಡಿದ ವಿಚಾರವನ್ನು ತಿಳಿಸುತ್ತಾ ಕನಕದಾಸರ ರಾಮಧಾನ್ಯ ಚರಿತೆಯನ್ನು ಚೊಕ್ಕಟವಾಗಿ ದಾಖಲಿಸಿದ್ದಾರೆ.

ದಿನಾಂಕ ೧೫-೧೨-೧೯೮೭ ರಂದು 'ಜಯವಂತ' ಅಭಿನಂದನ ಗ್ರಂಥ, ಜಮಖಂಡಿ ಇಲ್ಲಿ ಸಿ. ವಿ. ಕೆರಿಮನಿಯವರ 'ಭಾಷಾ ಸೌಧ' ಒಂದು ಪರಿಚಯ ಲೇಖನ ಪ್ರಕಟಗೊಂಡಿದೆ. ಡಾ. ಜೆ. ಎಸ್. ಕುಳ್ಳಿಯವರು ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದಂತೆ ಆರೇಳು ಗ್ರಂಥಗಳನ್ನು, ಹತ್ತಾರು ಸಂಶೋಧನಾ ಲೇಖನಗಳನ್ನು ಅವಲೋಕಿಸಿದ ಲೇಖಕರು, ಡಾ. ಜೆ. ಎಸ್. ಕುಳ್ಳಿಯವರ 'ಭಾಷಾ ಸೌಧ' ಎಂಬ ಕೃತಿಯ ಕುರಿತು ಲೇಖನದಲ್ಲಿ ವಿಶ್ಲೇಷಣೆಗೈದಿದ್ದಾರೆ. ಒಂದು ಕಟ್ಟಡದ ಪ್ರತಿಮೆಯ ಹಿನ್ನಲೆಯಲ್ಲಿ ರಚನೆಯನ್ನು ವಿವರಿಸುವ ಒಂದು ಅಪೂರ್ವ ಲೇಖನ ಭಾಷಾ ಸೌಧ. ಇಲ್ಲಿ ಮನೆಯ ಕಟ್ಟಡವನ್ನು ಭಾಷೆಯ ಕಟ್ಟಡಕ್ಕೆ ಪ್ರತಿಮೆಯಾಗಿರಿಸಿಕೊಳ್ಳಲಾಗಿದೆ. ಅತ್ಯಂತ ಸೂಕ್ಷ್ಮ ಸಂದರ್ಭಗಳಲ್ಲಿಯೂ ಕೂಡಾ ಈ ಪ್ರತಿಮೆ ಪರಸ್ಪರ ಅತ್ಯಂತ ಸ್ಪಷ್ಟವಾಗಿ ಹೊಂದಿಕೆಯಾಗುವಂತೆ ಸಕ್ರಿಯವಾಗಿ ಬೆಳೆಯುತ್ತ ಹೋಗುವಂತೆ ವಿಷಯವನ್ನು ಸಂಯೋಜಿಸಲಾಗಿರುವುದು ಆಶ್ಚರ್ಯಕರ! ಎಂದು ಆಶ್ಚರ್ಯ ವ್ಯಕ್ತಪಡಿಸುವ ಲೇಖಕರು ಉದಾಹರಣೆಯನ್ನು ಅವರವೇ ಮಾತುಗಳಲ್ಲಿ ಕೊಟ್ಟಿದ್ದಾರೆ. ".............. ಕಟ್ಟಡಕ್ಕೆ ಮೂಲದಲ್ಲಿ ಮಣ್ಣು ಇದ್ದಂತೆ, ಭಾಷೆಯ ಪ್ರಸಂಗ ಬಂದಾಗ ಮೂಲದ್ರವ್ಯವೆಂದರೆ ಧ್ವನಿ, ಮೂಲದ್ರವ್ಯವಾದ ಈ ಧ್ವನಿ ಅಪಾರವಾಗಿರುತ್ತದೆ. ಎಲ್ಲ ರೀತಿಯ ಮಣ್ಣನ್ನೂ ಇಟ್ಟಿಗೆ ಮಾಡಲು ಉಪಯೋಗಿಸದೇ ಒಂದು ವಿಶಿಷ್ಟ ಗುಣದ ಮಣ್ಣನ್ನು ಮಾತ್ರ ಉಪಯೋಗಿಸುತ್ತಾರೆ. ಅದೇ ರೀತಿ ಎಲ್ಲ ಧ್ವನಿಯೂ ಭಾಷೆಗೆ ಪ್ರಯೋಜನಕಾರಿಯಾಗದು., ಗಿಡದ ಎಲೆಯ ಸಪ್ಪಳ, ಮೋಡದ ಸಪ್ಪಳ, ಒಂದು ವಸ್ತುವನ್ನು ತಟ್ಟಿದಾಗ ಆಗುವ ಸಪ್ಪಳ ಎಲ್ಲವೂ ಧ್ವನಿಯೇ, ಆದರೆ ಇಂತಹ ಧ್ವನಿಯೆಲ್ಲಾ ಭಾಷೆಯಲ್ಲಿ ಬಳಕೆಯಾಗುವುದಿಲ್ಲ. ಇಂತಹ ಧ್ವನಿಗಳನ್ನು ಹೊರತುಪಡಿಸಿ, ಮಾನವನ ಧ್ವನ್ಯಂಗಗಳು ಹೊರಡಿಸುವ ಧ್ವನಿ ಮಾತ್ರ ಭಾಷೆಗೆ ಪ್ರಸ್ತುತ.

ಅದರಲ್ಲಿಯೂ ಮಾನವನ ಧ್ವನ್ಯಗಂಗಳೋ ಸಾವಿರಾರು ಧ್ವನಿಗಳನ್ನು ಹೊರಡಿಸುತ್ತವೆ. ಈ ಧ್ವನಿಗಳೆಲ್ಲ ಕೆಲವನ್ನು ಭಾಷೆಯಿಂದ ಹೊರಗಿಡಬೇಕಾಗುತ್ತದೆ...... ಇದ್ದುದರಲ್ಲಿಯೇ ಮಹತ್ವ ಧ್ವನಿಗಳನ್ನು ಮಾತ್ರ ಭಾಷೆ ಬಳಸಿಕೊಳ್ಳುತ್ತದೆ. ಅಂದರೆ ಇಟ್ಟಿಗೆ ಮಾಡಲು ಬೇಕಾದ ಮಣ್ಣಿನಲ್ಲಿ ನಿರುಪಯೋಗಿ ಜಾತಿಯ ಮಣ್ಣನ್ನು ಬಿಡುವಂತೆ, ಇಲ್ಲಿಯೂ ಪ್ರಸ್ತುತವಾದ ಮಾನವನ ಧ್ವನ್ಯಂಗಗಳು ಹೊರಡಿಸುವ ಧ್ವನಿಗಳಲ್ಲಿ ಕೆಲವನ್ನು ಬಿಡಬೇಕಾಗುತ್ತದೆ. ಹೀಗೆ ಅಮೂಲ್ಯವಾದ ಪ್ರತಿಮಾ ಹೇಳಿಕೆಗಳನ್ನು ಉಲ್ಲೇಖಿಸುತ್ತಾ ಲೇಖನದ ಮಹತ್ವವನ್ನು ಸಿ. ವಿ. ಕೆರಿಮನಿಯವರು ವಿವರಿಸುತ್ತಾರೆ. ಇಲ್ಲಿನ 'ಭಾಷಾ ಸೌಧದ ಸಿಂಗಾರವೇ ಸಾಹಿತ್ಯ' ಎಂಬ ಮಾತನ್ನು ಸಿ. ವಿ. ಕೆರಿಮನಿಯವರು ತುಂಬ ಮೆಚ್ಚಿಕೊಂಡಿದ್ದಾರೆ.

ಮತ್ತೊಂದು ಸಾಹಿತ್ಯ ಕಣಜದ ಕಾಳು ೧೯೭೭ ರಲ್ಲಿ 'ವಿವೇಕ' ಶಿರಹಟ್ಟಿ ತಾಲೂಕು ಶಾಲಾ ಸುಧಾರಣಾ ಸಮಿತಿಯಲ್ಲಿ ಪ್ರಕಟಗೊಂಡಿದೆ. ಈ ಲೇಖನದ ಪ್ರಾರಂಭದಲ್ಲಿ ಲೇಖಕರು ಕಲೆಯ ಬಗೆಗೆ ವಿವಿಧ ವಿದ್ವಾಂಸರು ಹೇಳಿದ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ. ಕಲೆಯನ್ನು ಗುರುತಿಸಲು ಕಣ್ಣು ಬೇಕು, ಕಲೆ ಸುಲಭವಾಗಿ ದಕ್ಕುವುದಲ್ಲ. ಬರಿ ಮಂತ್ರಕ್ಕೆ ಮಾವಿನಕಾಯಿ ಉದರಲಾರದು. ಕಲೆಯು ರಸಿಕನಾದವನಿಗೆ ಮೀಸಲು, ಚೀನಾ ಸೂಕ್ತಿಯನ್ನು ಲೇಖಕರು ಉದಾಹರಿಸಿದ್ದಾರೆ. "ಎರಡು ರೊಟ್ಟಿ ನಿನ್ನ ಬಳಿ ಇದ್ದರೆ, ಒಂದನ್ನು ಮಾರಿ ಒಂದು ಕನ್ನೈದಿಲೆಯನ್ನು ಕೊಂಡುಕೊ".

ಪ್ರಾಥಮಿಕ ಮಟ್ಟದಲ್ಲಿ ವಿದ್ಯಾರ್ಥಿಗಳಲ್ಲೂ ಕಲೆ ಸುಪ್ತವಾಗಿರುತ್ತದೆ. ರಸಿಕನಾದ ಶಿಕ್ಷಕ ಮಕ್ಕಳಲ್ಲಿಯ ಭಿನ್ನ ಭಿನ್ನ ರುಚಿಗಳನ್ನು ಗುರುತಿಸಿ ಯೋಗ್ಯ ಮಾರ್ಗದರ್ಶನ ಮಾಡಬೇಕಾಗುತ್ತದೆ. ಮಗುವಿನ ಮನಸ್ಸಿನ ವಿರುದ್ಧ ಯಾವುದೇ ಪ್ರಯತ್ನ ಮಾಡಿದರೂ ಅದು ವಿಫಲವಾಗುತ್ತವೆ. ಪಾಶ್ಚಾತ್ಯ ದೇಶದಲ್ಲಿದ್ದಂತೆ ಒಂದೊಂದು ರಂಗದಲ್ಲಿ ಅವರ ಆಸಕ್ತಿಯನ್ನು ಅರಿತು ವಿಶೇಷ ತರಬೇತಿಯನ್ನು ಕೊಡುವಂತೆ ನಮ್ಮ ದೇಶದಲ್ಲೂ ಬರಬೇಕು. ಅದಕ್ಕೆ ಸಾಕಷ್ಟು ಸೌಲಭ್ಯಗಳನ್ನು ಪ್ರೋತ್ಸಾಹವನ್ನು ನೀಡಿದ್ದಾದರೆ ಇಂದಿನ ಬಾಲಕರೇ ನಾಡಿನ ನಾಳಿನ ಬಹು ದೊಡ್ಡ ಆಸ್ತಿಯಾಗುತ್ತಾರೆ. ಹೀಗೆ ಕಲೆಯ ಮಹತ್ವವನ್ನು ಮತ್ತು ಪ್ರೋತ್ಸಾಹದ ಮಹತ್ವವನ್ನು ಮನೋಜ್ಞವಾಗಿ ಕಟ್ಟಿಕೊಟ್ಟಿದ್ದಾರೆ.

ಬಿ. ಎಂ. ಶ್ರೀಯವರು ನಾಟಕಗಳು ಎಂಬ ತಲೆಬರಹ. ದಡಿಯಲ್ಲಿ ಸಿ. ವಿ. ಕೆರಿಮನಿಯವರ ಸಾಹಿತ್ಯಿಕ ಲೇಖನ ಪ್ರಕಟಗೊಂಡಿದೆ. ೧೯೨೯ರಲ್ಲಿ ಪ್ರಕಟವಾದ 'ಅಶ್ವತ್ಥಾಮನ್' ಹಾಗೂ ೧೯೩೫ ರಲ್ಲಿ ಪ್ರಕಟವಾದ 'ಪಾರಸಿಕರು' ನಾಟಕಗಳ ಕುರಿತು ವಿಶ್ಲೇಷಣೆಗೈದಿದ್ದಾರೆ.

ಬಿ. ಎಂ. ಶ್ರೀಯವರ 'ಅಶ್ವತ್ಥಾಮನ್' ಎಂಬ ನಾಟಕ ಕನ್ನಡದಲ್ಲಿ ದುರಂತ ಅಥವಾ ರುದ್ರನಾಟಕದ ಪರಂಪರೆಯನ್ನೇ ನಿರ್ಮಿಸಿದ ವಿಷಯವನ್ನು ಹೆಮ್ಮೆಯಿಂದ ಹೇಳಿದ ಲೇಖಕರು, ಶ್ರೀಯವರ ಸಂಸ್ಕೃತ, ಕನ್ನಡ, ತಮಿಳು, ಲ್ಯಾಟಿನ್, ಗ್ರೀಕ್ ಭಾಷಾ ಪ್ರಭುತ್ವ, ಆಳವಾದ ಅಧ್ಯಯನವನ್ನು ಕೊಂಡಾಡಿದ್ದಾರೆ. ರುದ್ರನಾಟಕದ ಮಾದರಿಗೆ ತಕ್ಕಂತೆ ಶ್ರೀಯವರು ಅಶ್ವತ್ಥಾಮನ್ ಕಥೆಯಲ್ಲಿ ಮಾಡಿಕೊಂಡ ಬದಲಾವಣೆ ಶ್ರೀಯವರ ಪ್ರತಿಭಾಶಕ್ತಿಯ ಧ್ಯೋತಕವಾಗಿ ಕಂಡಿದ್ದಾರೆ. ಲೇಖಕರು ಶ್ರೀಯವರ ಬದಲಾವಣೆಗಳನ್ನು ಎಳೆಎಳೆಯಾಗಿ ತೋರಿದ್ದಾರೆ.

ಈಸ್ಕಿಲಸ್ ಮಹಾಕವಿಯ Persae ಕೃತಿಯನ್ನು ಉತ್ತಮ ಕೃತಿಯಲ್ಲದಿದ್ದರೂ ಅದನ್ನು ಶ್ರೀಯವರು ಆಯ್ದುಕೊಂಡಿದ್ದು, ಅವರ ಪ್ರಯೋಗಶೀಲತೆಯ ಬಲವೇ ಕಾರಣವಾಗಿದ್ದಿರಬೇಕು. ಇದೊಂದು ಐತಿಹಾಸಿಕ ಕೃತಿಯನ್ನು ಸೃಜನಾತ್ಮಕ ಸ್ವರೂಪದಲ್ಲಿ ಕನ್ನಡಿಸಿಕೊಡುವ ಪ್ರಯತ್ನವನ್ನು ಅವರು ಮಾಡಿದ್ದಾರೆ. ಶ್ರೀಯವರು ಜೀವನದುದ್ದಕ್ಕೂ ಬೆಲ್ಲಕ್ಕಿಂತ ಬೇವನ್ನೆ ಹೆಚ್ಚು ಮೆದ್ದವರು. ಇದೆಲ್ಲದರ ಪಡಿನೆಳಲನ್ನು ಅವರು ರಚಿಸಿರುವ ಈ ಗದಾಯುದ್ಧ ಅಶ್ವತ್ಥಾಮನ್, ಪಾರಸಿಕರು ನಾಟಕಗಳಲ್ಲಿ ಅವರು ಸ್ವಂತ

ಅನುಭವಿಸಿದ ವಿಷಣ್ಣಭಾಂತಿ ಮೂಡಿದೆ ಎಂದು ಸಿ. ವಿ. ಕೆರಿಮನಿಯವರು ಅಭಿಪ್ರಾಯಪಟ್ಟಿದ್ದಾರೆ.

ಡಾ. ಶಿವರಾಮ ಕಾರಂತರನ್ನು ದಿನಾಂಕ ೨೮-೦೮-೧೯೭೮ ರಂದು ಗದಗದಲ್ಲಿ ಸತ್ಕರಿಸಿದಾಗ, ಅವರ ಕುರಿತು ಅವರ 'ಸ್ವಪ್ನದ ಕಾದಂಬರಿಗಳು' ಎಂಬ ಲೇಖನ ಬರೆದು ಪ್ರಕಟಿಸಿದ್ದಾರೆ.

ಡಾ. ಶಿವರಾಮ ಕಾರಂತರು ಬರೆದ ಹಲವಾರು ಕಾದಂಬರಿಗಳಲ್ಲಿ ಕನಸುಗಾರಿಕೆಯ ಮೇಲೆ ಬರೆದ ಕಾದಂಬರಿಗಳು ಮೂರು. ೧) ಮೊಗ ಪಡೆದ ಮನ, ೨) ಸ್ವಪ್ನದ ಹೊಳೆ, ೩) ಚಿಗುರಿದ ಕನಸು. ಈ ಕಾದಂಬರಿಗಳಲ್ಲಿ ಆದರ್ಶವಾದವಿದ್ದರೂ ಇಂದಿನ ಸಮಾಜದಲ್ಲಿ ನಡೆಯುವ ಸಾಧ್ಯಾಸಾಧ್ಯತೆಗಳನ್ನು ಕುರಿತು ಬರೆದಿದ್ದಾರೆ. ಇವುಗಳಲ್ಲಿ ಕಲಾತ್ಮಕತೆ ಎದ್ದು ಕಾಣುತ್ತದೆ ಎಂದಿದ್ದಾರೆ ಲೇಖಕರು. 'ಮೊಗ ಪಡೆದ ಮನವು' ಓರ್ವ ನೃತ್ಯ ಕಲಾವಿದನ ಆಂತರಿಕ ಬೆಳವಣಿಗೆಯನ್ನು ಚಿತ್ರಿಸುತ್ತದೆ. ಕಾರಂತರು ಸ್ವತಃ ನೃತ್ಯಕಾರರು. 'ಸ್ವಪ್ನದ ಹೊಳೆ' ಇಲ್ಲಿ ಕಾದಂಬರಿಯ ನಾಯಕ ಕಿಟ್ಟಣ್ಣನ ಮುಖಾಂತರ ಎರಡು ಕಲಾಜೀವನದ ಸಮಸ್ಯೆಗಳನ್ನು ಹೇಳುತ್ತಾರೆ ಎಂದು ವಿಮರ್ಶೆಗೈಯುತ್ತಾರೆ ಲೇಖಕರು. 'ಚಿಗುರಿದ ಕನಸು' ಓರ್ವ ಕರ್ಮಯೋಗಿಯ ಜೀವನ ಚಿತ್ರಣವಿದೆ. ಮೇಲಿನ ಎರಡು ಕಾದಂಬರಿಗಳಿಗಿಂತ ವಸ್ತು, ತಂತ್ರ, ಪಾತ್ರ ಎಲ್ಲದರಲ್ಲಿಯೂ ಪರಿಪಾಕಗೊಂಡ ಅಂಶವನ್ನು ಸಿ. ವಿ. ಕೆರಿಮನಿಯವರು ಎತ್ತಿ ತೋರಿಸಿ ವಿಶ್ಲೇಷಣೆಗೈದಿದ್ದಾರೆ.

ಒಟ್ಟಾರೆಯಾಗಿ ಸಿ. ವಿ. ಕೆರಿಮನಿಯವರ ಸಾಹಿತ್ಯಿಕ ಸಂಶೋಧನೆಗಳು ಅವರ ಆಳವಾದ ಮತ್ತು ವಿಸ್ತಾರವಾದ ಅಧ್ಯಯನ ಮತ್ತು ವಿಮರ್ಶಾ ಪ್ರಭುತ್ವದ ದ್ಯೋತಕವಾಗಿ ಅವರ ಸಾಹಿತ್ಯಿಕ ಕಣಜದಲ್ಲಿ ಶೇಖರಗೊಂಡಿವೆ.

## ಅಧ್ಯಾಯ – ೩ :
# ಸಿ. ವಿ. ಕೆರಿಮನಿಯವರ ವ್ಯಕ್ತಿ ಚಿತ್ರಣಗಳು

ಸ್ವಾತಂತ್ರ್ಯ ಪೂರ್ವದ ಆಧುನಿಕ ಕನ್ನಡ ಕಾವ್ಯಕ್ಕೆ ನವೋದಯ ಕಾವ್ಯವೆಂದು ಹೆಸರು ಕೊಟ್ಟವರು ಕುವೆಂಪು ಎಂದು ಜಿ. ಎಸ್. ಶಿವರುದ್ರಪ್ಪನವರು ಹೇಳಿದ್ದಾರೆ.[೧] ಇಂಗ್ಲೆಂಡ್ ಅಥವಾ ಯುರೋಪದ ಸಾಹಿತ್ಯ ಪ್ರಕಾರಗಳು ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಬೀರಿದ ಸಂದರ್ಭವೇ ನವೋದಯ ವಸ್ತು ಉದ್ದೇಶ, ಪ್ರಕಾರಗಳು. ದೃಷ್ಟಿಯಿಂದ ಭಿನ್ನವಾದ ಪರಂಪರೆಯನ್ನು ಅನುಸರಿಸಿಕೊಂಡು ಬಂದ ಕನ್ನಡದ ಕೆಲವು ಲೇಖಕರು, ಬರಹಗಾರರು, ಕವಿಗಳು, ಹೊಸ ಹೊಸ ಸಾಹಿತ್ಯ ರೂಪಗಳನ್ನು ಕನ್ನಡಕ್ಕೆ ಪರಿಚಯಿಸಿ ಅರ್ಥಪೂರ್ಣ ಸ್ಥಾನವನ್ನು ಕಲ್ಪಿಸಿಕೊಟ್ಟರು. ತತಕ್ಷಣದ ಸ್ಫೂರ್ತಿಯಿಂದ ಸುಪ್ತಗೊಂಡ ತಪ್ತ ಆಶಯ ಮತ್ತು ಅನುಭವಗಳಿಗೆ ಸಂವಹನಗೊಳ್ಳುವ ತೀವ್ರತೆ ಹಾಗೂ ಆಕ್ಷಣಗಳ ಚಡಪಡಿಕೆಗೆ ಯಾವ ವಸ್ತು, ಘಟನೆ, ಸನ್ನಿವೇಶ, ಭಾವನೆಗಳು ಸಮಕ್ಷಮವಾದಾಗ ಜೀವಂತವಾಗಿ ಕ್ರಿಯೆಗೊಳ್ಳುವ ಸೃಜನಶೀಲ ಪ್ರಕ್ರಿಯೆಯೇ ಕಾವ್ಯಾತ್ಮಕ ಸಂಬಂಧಗಳಲ್ಲಿಯೇ ಅತ್ಯಂತ ವಿಶಿಷ್ಟವಾದದ್ದು.[೨]

ಕನ್ನಡದ ಬೇಂದ್ರೆ, ಕುವೆಂಪು, ಮಾಸ್ತಿ, ಗೋಕಾಕ್, ಕೆ.ಎಸ್.ಎನ್, ಮತಿನ ಕಣವಿ ಮುಂತಾದವರು ಕಾವ್ಯ ಮತ್ತು ಗದ್ಯ ಪ್ರಕಾರಗಳಲ್ಲಿ ನಾಡಿನ ಅನೇಕರ ಬಗ್ಗೆ ತಮ್ಮ ವಿಚಾರಗಳ ಜೊತೆಗೆ ವ್ಯಕ್ತಿಗಳ ಜೀವನದ ವೈಶಿಷ್ಟ್ಯವನ್ನು ವ್ಯಕ್ತಮಾಡುವ ವ್ಯಕ್ತಿ ಚಿತ್ರಣಗಳನ್ನು ರಚಿಸಿದ್ದಾರೆ. ಗದ್ಯಸಾಹಿತ್ಯದಲ್ಲಿ ರಚನೆಯಾಗುವ ವ್ಯಕ್ತಿ ಚಿತ್ರಣಗಳು ಒಬ್ಬ ವ್ಯಕ್ತಿಯ ಸಮಗ್ರ ಚಿತ್ರಣವನ್ನು ಘಟನೆಗಳನುಸಾರ ಮಾಹಿತಿ ಒದಗಿಸಿ ಪ್ರೇರೇಪಿಸುತ್ತವೆ. ವ್ಯಕ್ತಿಯ ಪ್ರೀತಿ, ವಿಶ್ವಾಸ, ನಂಬಿಕೆಗಳನ್ನು ಮೂಲವಾಗಿಟ್ಟುಕೊಂಡು ವ್ಯಕ್ತಿ ಚಿತ್ರಣಗಳು ಸೃಷ್ಟಿಗೊಳ್ಳುತ್ತಾ ಬಂದಿವೆ. ಹಾಗೆಯೇ ಮನುಷ್ಯನ ದೌರ್ಭಲ್ಯಗಳನ್ನು ಮೀರಿ, ಗುಣಮೌಲ್ಯದ ಕಡೆಗೆ ಹೆಚ್ಚು ಗಮನ ವೀಯುವ ಆಂತರ್ಯ ಪ್ರಧಾನ ಪಾತ್ರವಹಿಸುತ್ತದೆ.

## ೪.೧ ವ್ಯಕ್ತಿ ಚಿತ್ರಣಗಳ ಅಧ್ಯಯನದ ಮಹತ್ವ :

ಕನ್ನಡ ಬರವಣಿಗೆಯು ಗದ್ಯರೂಪದಲ್ಲಿರಲಿ, ಪದ್ಯರೂಪದಲ್ಲಿರಲಿ ಅಂತಹ ಹದದ ರೀತಿಯೇ ಆಗಿದೆ. ಗದ್ಯದಲ್ಲಿಯೂ ಸಾಹಿತ್ಯವಾಗಿರಲಿ, ಶಾಸ್ತ್ರವಾಗಿರಲಿ ಅವರ ಬರಹಗಳು ತನ್ನ ತನದ ಛಾಪನ್ನು ಪಡೆದಿರುವುದಾಗಿದೆ. ಅಂತಹವರ –

೧. ಜಿ.ಎಸ್.ಶಿವರುದ್ರಪ್ಪ : ನವೋದಯ ಪ್ರಕಾಶನ ಮೈಸೂರು.
೨. ಗುಂಡಣ್ಣ ಕಲಬುರ್ಗಿ : ಕಣವಿ ಮತ್ತು ಆಧುನಿಕ ಕಾವ್ಯ ಪರಂಪರೆ.

ತಾವು ಬದುಕಿನಲ್ಲಿ ನೋಡಿದ ಶ್ರೇಷ್ಠ ವ್ಯಕ್ತಿಗಳ ವ್ಯಕ್ತಿ ಚಿತ್ರಣಗಳನ್ನು ಬರೆಯುವದೆಂದರೆ ಮುಂದಿನ ಪೀಳಿಗೆಗೆ ಕಾಲದ ಹೆಜ್ಜೆ ಗುರುತುಗಳನ್ನು ದಾಖಲಿಸಿಕೊಡುವ ಉಪಕಾರ ಕ್ರಿಯೆಯಾಗಿದೆ.[೩] ವ್ಯಕ್ತಿ ಚಿತ್ರಣಗಳು ಓದುಗರನ್ನು ಆಕರ್ಷಿಸಿಸುತ್ತಾ ಹೊಸ ಹೊಸ ಸವಾಲುಗಳನ್ನು ಎದುರಿಸುತ್ತಲೇ ಇಂದು ಪ್ರಕಟಗೊಳ್ಳುತ್ತಿವೆ. ಅವುಗಳ ಅಧ್ಯಯನ ಓದುಗರಿಗೆ ಆಯಾ ವ್ಯಕ್ತಿಗಳ ನಿಜ ವ್ಯಕ್ತಿತ್ವವನ್ನು ಮುಕ್ತವಾಗಿ ತೆರೆದಿಡುತ್ತವೆ. ಯಾವುದೇ ಮಾಧ್ಯಮವನ್ನು ಕವಿ ಅನ್ವೇಷಿಸುವಾಗ ಆತ ತನ್ನ ಭಾವನೆಗಳ ಚಿಂತನೆಗಳ ಸಾಮರ್ಥ್ಯವನ್ನು ಕುರಿತು ಅನ್ವೇಷಣೆಯಲ್ಲಿ ತೊಡಗಿರುತ್ತಾನೆ. ಭಾವಾವೇಶವಿಲ್ಲದ ಭಾವನೆ ಮತ್ತು ಚಿಂತನೆಗಳ ಸಮತೋಲವನ್ನು ಕಂಡುಕೊಂಡ ಲೇಖಕ ಪ್ರಮುಖ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಯಾವುದೇ ಮುಕ್ಕಿಲ್ಲದೇ ವ್ಯಕ್ತಪಡಿಸುತ್ತಾರೆ. ವ್ಯಕ್ತಿ ಚಿತ್ರಣಗಳ ಕ್ರಮಬದ್ಧ ಅಧ್ಯಯನದಿಂದ ನಾಡಿನ ಶ್ರೇಷ್ಠ ವ್ಯಕ್ತಿಗಳ, ಶರಣರ, ಸಾಹಿತಿಗಳ ಜೀವನ ಕ್ರಮ ಹಾಗೂ ವೈಚಾರಿಕ ಮನೋಧರ್ಮವನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ.

ಸಿ. ವಿ. ಕೆರಿಮನಿಯವರು ಒಬ್ಬ ಸೃಜನಶೀಲ ಬರಹಗಾರರು. ತಮ್ಮ ಪರಿಸರದಲ್ಲಿ ಮತ್ತು ಕನ್ನಡ ನಾಡು ನುಡಿಗಾಗಿ ಹೋರಾಟ ಮಾಡಿದ ಮಹನೀಯರು. ಕನ್ನಡ ನಾಡಿನಲ್ಲಿ ಆಗಿ ಹೋದ ಶರಣರ ಜೀವನ ಚರಿತ್ರೆಗಳನ್ನು ಅತ್ಯಂತ ನಿಷ್ಠೆಯಿಂದ ಏಕಮುಖವಲ್ಲದ ಸಮತೂಕದ ವ್ಯಕ್ತಿತ್ವವನ್ನು ಅನಾವರಣಗೊಳಿಸುವ ಅನೇಕ ವ್ಯಕ್ತಿಚಿತ್ರಣಗಳನ್ನು ರಚಿಸಿದ್ದಾರೆ. ಸಿ. ವಿ. ಕೆರಿಮನಿಯವರ ಬರವಣಿಗೆಯು ಭಾಷಾ ಶೈಲಿಯಿಂದ ನೇರ, ಸರಳ ಹಾಗೂ ವ್ಯಕ್ತಿತ್ವಕ್ಕೆ ತಕ್ಕಂತೆ ತೂಕವಾಗುವ ವಿಶಿಷ್ಟ ಶೈಲಿಯನ್ನು ಹೊಂದಿದೆ. ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮರಾಠಿಯ ಗದ್ಯ ಸಾಹಿತ್ಯದ ಜನಕ ಎಂದೇ ಖ್ಯಾತರಾದ ವಿಷ್ಣು ಶಾಸ್ತ್ರಿ ಚಿಪಳೂನಕರ ಬಗೆಗೆ ರಾಷ್ಟ್ರೋತ್ಥಾನ ಸಾಹಿತ್ಯ ಭಂಡಾರ ಬೆಂಗಳೂರಿನ ೪೩೬ ನೇ ಆವೃತ್ತಿಯಾಗಿ ಪ್ರಕಟಿಸಿದರು. ಚಿಪಳೂನಕರ ಅವರ ದೇಶ ಪ್ರೇಮ, ಸಾಹಿತ್ಯದ ಬಗೆಗೆ ಇರುವ ಒಲವನ್ನು ವ್ಯಕ್ತಪಡಿಸಿದ್ದಾರೆ. ಕನ್ನಡದ ಅದಾಂನೆಪ್ಪ ದೊಡ್ಡಮೇಟಿ ಸರ್, ಸಿದ್ದಪ್ಪ ಕಂಬಳಿ, ಹುತಾತ್ಮ ಮೈಲಾರ ಮಹಾದೇವ, ಎಂ. ಎಸ್. ಸುಂಕಾಪೂರ ಮುಂತಾದ ಮಹನಿಯರನ್ನು ಕುರಿತು ವ್ಯಕ್ತಿ ಚಿತ್ರಣಗಳನ್ನು ರಚಿಸಿದ್ದಾರೆ. ಅವರ ಜೀವನ, ಸಾಧನೆ, ಹೋರಾಟ, ನಾಡಿಗೆ ಅವರು ಸಲ್ಲಿಸಿದ ಸೇವೆ ಮುಂತಾದವುಗಳನ್ನು ಸಿ. ವಿ. ಕೆರಿಮನಿಯವರು ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಓದುಗರನ್ನು ಸೆರೆಹಿಡಿಯುವ ಭಾಷೆಯಲ್ಲಿ ಹೃದ್ಯವಾಗಿ ಅವುಗಳನ್ನು ವಿವರಿಸುವ ಕಾರ್ಯವನ್ನು ನಿರ್ವಹಿಸಿದ್ದಾರೆ.

## ೪.೨ ನಾಡಿನ ಶ್ರೇಷ್ಠ ವ್ಯಕ್ತಿಗಳ ವ್ಯಕ್ತಿ ಚಿತ್ರಣಗಳು :

ಕನ್ನಡ ನಾಡು ವಿಶಿಷ್ಠ ಸಂಸ್ಕೃತಿಯನ್ನು ಹೊಂದಿದ ನಾಡು. ಕವಿರಾಜಮಾರ್ಗಕಾರ 'ಕಾವೇರಿಯಿಂದ ಮಾ ಗೋದಾವರಿವಮಿರ್ದಂ' ಎಂದು ಕನ್ನಡ ನಾಡಿನ ಸೀಮೆಯನ್ನು ನಿರ್ಧರಿಸಿದ್ದಾರೆ.

---

೩. ಗಿರಿಕುಂಜರ : ದಿನೇಶ ಶೆಟ್ಟಿ, ರೆಂಜಾಳ.

ಕನ್ನಡ ನಾಡು ಕರ್ನಾಟಕವೆಂಬ ಹಲವು ಸಂಗತಿಗಳ ಆಗರ ಎನ್ನುವ ಮೂಲಾರ್ಥದಲ್ಲಿ ಬಳಕೆಯಾಗುತ್ತಿದೆ. ಭಾರತೀಯ ಸಾಂಸ್ಕೃತಿಕ ಪರಿಸರದಲ್ಲಿ ಕನ್ನಡ ಅಥವಾ ಕರ್ನಾಟಕದ ಚರಿತ್ರೆ ಬಹಳ ಪುರಾತನವಾದದ್ದು. ಅಂತಹ ಸಂಸ್ಕೃತಿಗೆ ತನ್ನದೇ ಆದ ಅನನ್ಯತೆ ಇದೆ. ಕನ್ನಡ ಎಂಬ ಪರಿಕಲ್ಪನೆಯನ್ನು ಭಾಷೆ, ಸಾಹಿತ್ಯ, ಬದುಕು, ಸಂಸ್ಕೃತಿ ಮುಂತಾದವುಗಳನ್ನು ಪ್ರತಿನಿಧಿಸುವುದಾಗಿದೆ. ಕನ್ನಡ ನಾಡು, ನುಡಿ, ಕಲೆ, ಸಂಸ್ಕೃತಿಯೇ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಅಪಾರವಾದ ಸೇವೆಯನ್ನು ಸಲ್ಲಿಸಿಯೂ ಅಜ್ಞಾತರಾಗಿ ಉಳಿದ ವ್ಯಕ್ತಿಗಳನ್ನು ಕುರಿತು ಹಾಗೂ ನಾಡು-ನುಡಿ ಕಟ್ಟುವಲ್ಲಿ ನೇರವಾದ ಮಹನಿಯರನ್ನು ಕುರಿತು ಅನೇಕ ಪುಸ್ತಕಗಳು ಹಾಗೂ ಲೇಖನಗಳನ್ನು ಸಿ. ವಿ. ಕೆರಿಮನಿಯವರು ಪ್ರಕಟಿಸಿದ್ದಾರೆ.

ಶ್ರೇಷ್ಠರನ್ನು ಕುರಿತು ಲೇಖಕರ ಗೌರವವಾದರ ಕಣಜದ ಕೊನೆಯ ಕಾಳು ಲೇಖಕರು ಅದನ್ನು 'ಶ್ರೇಷ್ಠರ ಕಣಜ'ವೆಂದೇ ಗುರುತಿಸಿದರು. ಶ್ರೇಷ್ಠರ ಕಣಜದಲ್ಲಿ ಪ್ರಕಟವಾದ ಎಲ್ಲ ವ್ಯಕ್ತಿ ಚಿತ್ರಣಗಳಲ್ಲಿ ಹುತಾತ್ಮ ಮೈಲಾರ ಮಹಾದೇವರನ್ನು ಬಿಟ್ಟರೆ ಉಳಿದವರೆಲ್ಲರೂ ಕೃತಿಕಾರರಿಗೆ ಪರಿಚಿತರೇ ಈ ಭಾಗದಲ್ಲಿ ಮೂಡಿ ಬಂದದೆ. ಒಬ್ಬೊಬ್ಬರಲ್ಲೂ ಒಂದೊಂದು ಆದರ್ಶವನ್ನು ಸಿ. ವಿ. ಕೆರಿಮನಿಯವರು ಗುರುತಿಸಿದರು.[೪] ದೇಶಪ್ರೇಮಕ್ಕಾಗಿ ಬದುಕನ್ನೆ ಬಲಿಕೊಟ್ಟ ದೇಶ ಪ್ರೇಮಿಗಳು, ಜಿಡ್ಡು ಹಿಡಿದ ಸಮಾಜ ತಿದ್ದುವ ಸಮಾಜ ಸುಧಾರಕರು, ಸಾಹಿತಿಗಳು, ಸಂಶೋಧಕರು, ರಾಜಕಾರಣಿಗಳು, ವೈದ್ಯರು, ವಕೀಲರು, ವೃತ್ತಿ ಯಾವುದಾದರೇನು ಲೇಖಕರಿಗೆ ಅವರ ಪ್ರವೃತ್ತಿಯೇ ಮುಖ್ಯವೆನ್ನುವುದನ್ನು ತಮ್ಮ ಲೇಖನದಲ್ಲಿ, ಪುಸ್ತಕಗಳಲ್ಲಿ ವ್ಯಕ್ತಪಡಿಸಿದ್ದಾರೆ.

ನಾಡಿನ ಶ್ರೇಷ್ಠ ವ್ಯಕ್ತಿಗಳಲ್ಲಿ ಕಂಡ ಒಳ್ಳೆಯ ಗುಣಗಳನ್ನು ತಮ್ಮ ಪುಸ್ತಕಗಳ ಮೂಲಕ ಮುಂದಿನ ಪೀಳಿಗೆಗೆ ಓದಿ, ಅನುಸರಿಸಲು ಅನುಕೂಲವಾಗುವ ಮಾಹಿತಿಗಳನ್ನು ಸಿ. ವಿ. ಕೆರಿಮನಿಯವರು ಒದಗಿಸಿದ್ದಾರೆ. ಮೌಲ್ಯದ ದೃಷ್ಟಿಯಿಂದ ಸಿ. ವಿ. ಕೆರಿಮನಿಯವರ ವ್ಯಕ್ತಿ ಚಿತ್ರಣಗಳನ್ನು ಅಧ್ಯಯನಕ್ಕೆ ಯೋಗ್ಯವೆಂದು ನನ್ನ ಭಾವನೆ.

ಅಂದಾನೆಪ್ಪ ದೊಡ್ಡಮೇಟಿ ಭಾರತೀಯ ಸ್ವಾತಂತ್ರ್ಯ ಚಳುವಳಿ ಹಾಗೂ ಕರ್ನಾಟಕ ಏಕೀಕರಣ ಚಳುವಳಿಯ ಸಂದರ್ಭದಲ್ಲಿ ಕಂಡುಬರುವ ಕನ್ನಡಿಗರ ಸದಾವಕಾಲ ನೆನಪಿಸಿಕೊಳ್ಳಲೇ ಬೇಕಾದ ಹೆಸರು. ರೋಣ ತಾಲೂಕಿನ 'ಜಕ್ಕಲಿ' ಗ್ರಾಮದಲ್ಲಿ ಜನಿಸಿದ ಅಂದಾನೆಪ್ಪ ವೈಯಕ್ತಿಕ ಚಳುವಳಿ ಮಾಡಿ ನಂತರ ಕಾಂಗ್ರೇಸ್ ಸೇರಿ ಭಾರತ ಸ್ವಾಂತ್ರ್ಯ ಆಂದೋಲನದಲ್ಲಿ ಜೈಲು ಶಿಕ್ಷೆ ಅನುಭವಿಸಿದರು. ಮಹಾತ್ಮಾ ಗಾಂಧೀಜಿಯವರ ತತ್ವಾದರ್ಶನಗಳ ಪ್ರಭಾವಕ್ಕೆ ಒಳಗಾದ ಅಂದಾನೆಪ್ಪ ದೊಡ್ಡಮೇಟಿ ಜಮಖಂಡಿ ಮತ್ತು ರಾಮದುರ್ಗ ಸಂಸ್ಥಾನಗಳ ಜನತಾ ಸಭೆಯ ಅಧ್ಯಕ್ಷರಾಗಿ, ಶಾಸಕರಾಗಿ, ಮಂತ್ರಿಗಳು ಕನ್ನಡ ನಾಡಿನ ಸೇವೆ ಸಲ್ಲಿಸಿದವರು. ಸರಳ ಜೀವನ ಶೈಲಿ, ಅಹಿಂಸೆ ಸಂಪೂರ್ಣ ಪ್ರಾಮಾಣಿಕತೆಯನ್ನು ಜೀವನದಲ್ಲಿ ಅಳವಡಿಸಿಕೊಂಡ ಅಂದಾನೆಪ್ಪ ದೊಡ್ಡಮೇಟಿಯವರ ಜೀವನ ಚರಿತ್ರೆಯನ್ನು

೪. ಕಣಜ ಕೃತಿಯನ್ನು ಕುರಿತು : ಪ್ರೋ. ಎಸ್. ಬಿ. ಕರಿಭರಮಗೌಡರ ಲೇಖನ.

ಸಿ. ವಿ. ಕೆರಿಮನಿಯವರು ವ್ಯಕ್ತಿಯ ವ್ಯಕ್ತಿತ್ವ, ಸಾಧನೆಗಳನ್ನು ದಾಖಲಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅಂದಾನೆಪ್ಪನವರ ಜೀವನಾದರ್ಶಗಳ ಇಂದಿನ ಯುವಕರಿಗೆ, ಸಮಾಜ ಸುಧಾರಕರಿಗೆ, ರಾಜಕಾರಣಿಗಳಿಗೆ ಆದರ್ಶವಾಗಬೇಕೆಂದು ಸೂಚ್ಯವಾಗಿ ನಿರ್ದೇಶನವನ್ನು ನೀಡಿದ್ದಾರೆ.

ಅಂದಾನೆಪ್ಪ ದೊಡ್ಡಮೇಟಿಯವರ ಜೀವನ ಹಾಗೂ ಹೋರಾಟಗಳಲ್ಲಿ ಮಹಾತ್ಮಾ ಗಾಂಧೀಜಿಯವರು ತುಂಬಾ ಪ್ರಭಾವ ಬೀರಿದ್ದರು. ಸುಮಾರು ೧೯೩೨ ನೆಯ ಇಸ್ವಿಯಲ್ಲಿ ಮಹಾತ್ಮಾ ಗಾಂಧೀಜಿಯವರನ್ನು ಭೇಟಿ ಮಾಡಿದ್ದರು. ಜಿಲ್ಲಾಧಿಕಾರಿಯಿಂದ ಇವರ ಮೇಲೆ ತಾಲ್ಲೂಕ ಬಂಧಿ ಆಜ್ಞೆ ಜಾರಿಯಾಗಿ ಜೈಲುವಾಸವನ್ನು ಅನುಭವಿಸಿದರು. ಬೆಳಗಾವಿ ಹಿಂಡಲಾ ಜೈಲಿನಲ್ಲಿ ಶಿಕ್ಷೆಯನ್ನು ಅನುಭವಿಸಿ ಮೇಲೆ ಸಾಮೂಹಿಕ ಕಾಯಿದೆ ಭಂಗ ಆಂದೋಲನವನ್ನು ವೈಯಕ್ತಿಕ ಕಾಯಿದೆ ಭಂಗದಲ್ಲಿ ಪರಿವರ್ತಿಸಿ ಇವರನ್ನು ಬಿಡುಗಡೆ ಮಾಡಿದರು. ನಂತರ ಅಂದಾನೆಪ್ಪ ದೊಡ್ಡಮೇಟಿಯವರು ಮಹಾತ್ಮಾ ಗಾಂಧೀಜಿಯವರ ಪ್ರೇರಣೆಯಂತೆ ಹರಿಜನ ಸಂಘ ಸ್ಥಾಪಿಸಿ ತಾವೇ ಅದರ ಅಧ್ಯಕ್ಷರಾದರು.

ಪ್ರಸ್ತುತ ಅಂದಾನೆಪ್ಪ ದೊಡ್ಡಮೇಟಿಯವರ ಪುಸ್ತಕದಲ್ಲಿ ಅಂದಾನಪ್ಪನವರ ಜೀವನದ ಘಟನೆಗಳನ್ನು, ಅವರ ಮೌಲ್ಯಗಳನ್ನು, ಕನ್ನಡ ನಾಡು-ನುಡಿಗಾಗಿ ಅವರು ಸಲ್ಲಿಸಿದ ಅನುಪಮ ಸೇವೆಯನ್ನು ವಸ್ತುನಿಷ್ಠವಾಗಿ, ಕ್ರಮಬದ್ಧವಾಗಿ ಓದುಗರನ್ನು ಆಕರ್ಷಿಸುವಂತೆ, ಓದಿದ ನಂತರ ಅವರ ಮೌಲ್ಯಾದರ್ಶನಗಳನ್ನು ಅಳವಡಿಸಿಕೊಳ್ಳುವಂತೆ ಸಿ. ವಿ. ಕೆರಿಮನಿಯವರು ವಿವರಿಸಿದ್ದಾರೆ.

ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯರಾಗಿ ಸಿ. ವಿ. ಕೆರಿಮನಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಕನ್ನಡ ಪುಸ್ತಕ ಪ್ರಾಧಿಕಾರದ ಕನ್ನಡ ಕಟ್ಟಿದವರು ಮಾಲೆ ಅಡಿಯಲ್ಲಿ ಸರ್ ಸಿದ್ದಪ್ಪ ಕಂಬಳಿ ೨೦೧೨ ರಲ್ಲಿ ಪುಸ್ತಕವನ್ನು ಸಿ. ವಿ. ಕೆರಿಮನಿಯವರು ಹೊರತಂದಿದ್ದಾರೆ.

ಉತ್ತರ ಕರ್ನಾಟಕದ ಪ್ರಮುಖರಲ್ಲಿ ಒಬ್ಬರಾದ ಸಿದ್ದಪ್ಪ ಕಂಬಳಿಯವರು ಹುಬ್ಬಳ್ಳಿಯಲ್ಲಿ ಜನಿಸಿ ತಮ್ಮ ಬಾಳಿನುದ್ದಕ್ಕೂ ದಿವ್ಯ ಬದುಕನ್ನು ನಡೆಸಿ, ತಮ್ಮ ಅಧಿಕಾರದ ಅವಧಿಯಲ್ಲಿ ಕರ್ನಾಟಕ ಸಂಸ್ಕೃತಿಯನ್ನು ಮತ್ತು ನಾಡು-ನುಡಿಯನ್ನು ಉಜ್ವಲಗೊಳಿಸಿದವರು. ಚಿಕ್ಕಂದಿನಿಂದಲೂ ಜೀವನಕ್ಕಾಗಿ ಹೋರಾಟವನ್ನೇ ಅವಲಂಬಿಸಬೇಕಾಗಿ ಬಂದ ಸಿದ್ದಪ್ಪ ಕಂಬಳಿಯವರು, ವಕೀಲರಾಗಿ, ಧ್ಯೇಯ ನಿಷ್ಠೆಗಳಿಂದ ಮತ್ತು ಸಂಘಟನಾ ಬಲದಿಂದ ತಮ್ಮ ವ್ಯಕ್ತಿತ್ವವನ್ನು ಹೋರಾಟಗಾರರಾಗಿ ಮುಂಬೈ ಸರಕಾರದಲ್ಲಿ ಮಂತ್ರಿಗಳಾಗಿ ಕನ್ನಡ ನಾಡು-ನುಡಿಗೆ ಸಿದ್ದಪ್ಪ ಕಂಬಳಿಯವರ ಸೇವೆಯನ್ನು ಸಿ. ವಿ. ಕೆರಿಮನಿಯವರು ತಮ್ಮ ಪುಸ್ತಕದಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ.

ರಾಜಕೀಯವೆಂದರೆ ಸಿದ್ದಪ್ಪ ಕಂಬಳಿಯವರಿಗೆ ಅಷ್ಟಕ್ಕಷ್ಟೇ. ಇವರ ಹೋರಾಟದ ಗುಣವನ್ನು ಕಂಡು ಕಾಂಗ್ರೇಸ ಪಕ್ಷಕ್ಕೆ ಸೇರಿಕೊಳ್ಳುವ ಇಚ್ಚೆಯನ್ನು ವ್ಯಕ್ತಪಡಿಸಿದರು. ಮಹಾತ್ಮಾ ಗಾಂಧೀಜಿಯವರು

ಹುಬ್ಬಳ್ಳಿಗೆ ಆಗಮಿಸಿದಾಗ ಸಿದ್ದಪ್ಪ ಕಂಬಳಿಯವರಿಗೆ ಆಮಂತ್ರಣ ಕೊಟ್ಟರು. ಅವರು ಪಕ್ಷವನ್ನು ಸೇರಲು ಇಚ್ಚಿಸಲಿಲ್ಲ. ಧಾರವಾಡ ಒಂದು ಸಾಂಸ್ಕೃತಿಕ ನಗರಿ ಎಂದು ಕರೆಯಿಸಿಕೊಳ್ಳಲು ಸಿದ್ದಪ್ಪ ಕಂಬಳಿಯವರು ಶ್ರಮ ಅದ್ವಿತೀಯ. ಲಿಂಗರಾಜ ಕಾಲೇಜು, ಕರ್ನಾಟಕ ಕಾಲೇಜು, ಕನ್ನಡ ಗಂಡು ಮಕ್ಕಳ ಟ್ರೇನಿಂಗ ಕಾಲೇಜು, ಕರ್ನಾಟಕ ವಿಶ್ವವಿದ್ಯಾಲಯ ಇವುಗಳ ಪ್ರಾರಂಭಕ್ಕೆ ತಮ್ಮ ತನು, ಮನ, ಧನದಿಂದ ಪ್ರಯತ್ನಿಸಿದವರು. ಅವರೆಲ್ಲ ಸಾಧನೆಗಳನ್ನು ಸಿ. ವಿ. ಕೆರಿಮನಿಯವರು ವಸ್ತು ನಿಷ್ಟವಾಗಿ ದಾಖಲಿಸುವ ಪ್ರಯತ್ನವನ್ನು ಪ್ರಸ್ತುತ ಪುಸ್ತಕದಲ್ಲಿ ಮಾಡಿದ್ದಾರೆ.

ಸಮರ್ಥ ಆಡಳಿತಗಾರ, ಕರ್ನಾಟಕ ಏಕೀಕರಣದ ರೂವಾರಿ, ಸರ್. ಸಿದ್ದಪ್ಪ ಕಂಬಳಿಯವರು ಸರಳತೆಯ ಸಾಕಾರ ಮೂರ್ತಿಗಳಾಗಿದ್ದರು. ಸ್ವಜನ ಪಕ್ಷಪಾತ, ಭ್ರಷ್ಟಾಚಾರ, ಅನೈತಿಕ ರಾಜಕಾರಣವೇ ಮುಖ್ಯವಾದ ಇಂದಿನ ರಾಜಕಾರಣಿಗಳಿಗೆ ಸರ್ ಸಿದ್ದಪ್ಪ ಕಂಬಳಿಯವರು ಆದರ್ಶವಾಗಿದ್ದಾರೆ ಎಂದು **ಸಿ. ವಿ. ಕೆರಿಮನಿಯವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.**

ರಾಜಕೀಯ ಹಾಗೂ ಧರ್ಮನಿಷ್ಠತೆ ಪರಸ್ಪರ ವಿರುದ್ಧವಾಗಿ ಅವರಿಗೆ ತೋರಲಿಲ್ಲ. ಅವರ ಧರ್ಮದ ಜೊತೆಗೆ ಅನ್ಯಧರ್ಮಗಳನ್ನು ಪ್ರೀತಿಸುವ ಧರ್ಮಸಹಿಷ್ಣುರಾಗಿದ್ದರು ಎಂಬ ಸರ್. ಸಿದ್ದಪ್ಪ ಕಂಬಳಿಯವರ ಗುಣವನ್ನು ಸಿ. ವಿ. ಕೆರಿಮನಿಯವರು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ.

ಸರ್ ಸಿದ್ದಪ್ಪ ಕಂಬಳಿಯವರ ವ್ಯಕ್ತಿತ್ವ ಕುರಿತು ಪ್ರೋ. ಸೀತಾರಾಮಯ್ಯ ಅವರು ತಮ್ಮ ಕವಿತೆಯಲ್ಲಿ ಸಿದ್ದಪ್ಪ ಕಾಂಬಳಿಯವರ ವ್ಯಕ್ತಿತ್ವಕ್ಕೆ ಭಾಷ್ಯದಂತಿದೆ.

**"ಮಣಿಯದಿಹ ಮನವೊಂದು**
**ಸಾಂಧಿಸುವ ಹಠವೊಂದು**
**ನಿಜದ ನೇರಕೆ ನಡೆವ ನಿಶ್ಚಲತೆಯೊಂದು**
**ಅನ್ಯಾಯಕೆಂದಿಗೂ ಬಾಗದೆಚ್ಚರವೊಂದು**
**ಮರುಕಕ್ಕೆ ಪ್ರೇಮಕ್ಕೆ ಚಿರ ತೆರೆದ ಎದೆಯೊಂದು................."**

ಸಹನೆ, ತಾಳ್ಮೆ, ಶಾಂತಿ, ಸಮಾಧಾನ, ಸಹಿಷ್ಣುತೆ ಸರ್. ಸಿದ್ದಪ್ಪ ಕಂಬಳಿಯವರ ಗೆಲುವಿನ ರಹಸ್ಯಗಳೆಂದು ಅವರ ವ್ಯಕ್ತಿತ್ವ ನಿಜತ್ವವನ್ನು ತಿಳಿಯಪಡಿಸಿದ್ದಾರೆ.

ಸ್ವಾತಂತ್ರ್ಯಕ್ಕಿಂತ ಪೂರ್ವದಲ್ಲಿ ಭಾರತ ಬ್ರಿಟಿಷರ ಆಧೀನದಲ್ಲಿತ್ತು. ಸುಮಾರು ಮೂರುನೂರು ವರ್ಷಗಳ ಕಾಲ ಬ್ರಿಟಿಷರ ದಬ್ಬಾಳಿಕೆಗೆ ಮಿತಿ ಮೀರಿತ್ತು. ಬ್ರಿಟಿಷರ ದಬ್ಬಾಳಿಕೆಯನ್ನು ಸಹಿಸದ ಅಂದಿನ ಕೆಲ ದೇಶಪ್ರೇಮಿಗಳು ಅವರ ವಿರುದ್ಧ ಹೋರಾಟ ಮಾಡಬೇಕೆಂದು ನಿಶ್ಚಯಿಸಿದರು. ಅವರಲ್ಲಿ

ಪ್ರಮುಖರೆಂದರೆ ಶ್ರೀ ಗೋಪಾಲಕೃಷ್ಣ ಗೋಖಲೆ, ಲೋಕಮಾನ್ಯ ತಿಲಕ, ಲಾಲಾ ಲಜಪತರಾಯ, ಅರವಿಂದ ಘೋಷ, ಸತೀಶಚಂದ್ರ ಮುಖರ್ಜಿ, ದಾದಾಬಾಯಿ ನವರೋಜಿ ಇನ್ನೂ ಅನೇಕರು ಕೆಚ್ಚೆದೆಯಿಂದ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದರು.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕನ್ನಡಿಗರೂ ಮುಖ್ಯವಾದ ಪಾತ್ರವನ್ನು ವಹಿಸಿದರು. ತ್ಯಾಗ ಬಲಿದಾನಗಳ ಮೂಲಕ ಅನೇಕ ಕನ್ನಡಿಗರೂ ಸ್ವರಾಜ್ಯಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟವರು. ದೇಶ ಪ್ರೇಮದ ಅಪರಾಧಕ್ಕಾಗಿ ಜೀವನವನ್ನೇ ಬಲಿದಾನ ಕೊಟ್ಟವರು. 'ಮಾಡು ಇಲ್ಲವೇ ಮಡಿ' ಎಂಬ ಚಳುವಳಿ ಕರ್ನಾಟಕದಲ್ಲಿ ಬಿರುಗಾಳಿಯಂತೆ ಬೀಸಿತು. ಕಾರಣ ಅನೇಕ ದೇಶಾಭಿಮಾನಿಗಳು ಜೈಲು ಶಿಕ್ಷೆ ಅನುಭವಿಸಬೇಕಾಯಿತು. ಅಂತವರಲ್ಲಿ ಹುತಾತ್ಮ ಮೈಲಾರ ಮಹಾದೇವ ದೇಶ ಕಂಡ ಅದ್ವಿತೀಯ ದೇಶಪ್ರೇಮಿ.

**"ನಾಳೆ ಬಪ್ಪುದು ನಮಗಿಂದೇ ಬರಲಿ**
**ಇಂದು ಬಪ್ಪುದು ನಮಗೀಗಲೇ ಬರಲಿ**
**ಇದಕಾರಂಜುವರು? ಇದಕಾರಳಕುವರು?**
**ಜಾತಸ್ಯಮರಣಂ ಧ್ರುವಂ!"**

ಎನ್ನುವ ಶರಣರ ವಾಣಿಯನ್ನು ಜೀವನದ ಕೊನೆಯುಸಿರುವರೆಗೂ ಪಾಲಿಸಿಕೊಂಡು ಬಂದ ಮಹಾನುಭಾವ ಮೈಲಾರ ಮಹಾದೇವರವರು.

ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಡಂಬಳ– ಗದುಗದವರು ೧೯೭೬ ರಲ್ಲಿ ವೀರಶೈವ ಪುಣ್ಯ ಪುರುಷ ಸಾಹಿತ್ಯ ರತ್ನ ಮಾಲೆಯಲ್ಲಿ ಸಿ. ವಿ. ಕೆರಿಮನಿಯವರ ಬರೆದಿರುವ ಹುತಾತ್ಮ ಮೈಲಾರ ಮಹಾದೇವ ಪುಸ್ತಕವನ್ನು ಪ್ರಕಟಿಸಿದೆ. ತನ್ಮೂಲಕ ಮೈಲಾರ ಮಹಾದೇವರವರ ಜೀವನ, ಸಾಧನೆ, ಅನುಭವಿಸಿದ ಕಷ್ಟಗಳನ್ನು ಯಥಾವತ್ತಾಗಿ ಸಿ. ವಿ. ಕೆರಿಮನಿಯವರು ಚಿತ್ರಿಸಿದ್ದಾರೆ. ನಾಡಿಗಾಗಿ ಯಾವೊಬ್ಬ ವ್ಯಕ್ತಿ ಹೊಂದಬೇಕಾದ ನಿಲವು, ಅನುಸರಿಸುವ ಮಾರ್ಗಗಳು, ಮೈಲಾರಪ್ಪನ ಜೀವನ ಅರ್ಥವಾಗಿ ನಿಲ್ಲುತ್ತದೆ. ಒಬ್ಬ ದೇಶಪ್ರೇಮಿಗೆ 'ಒಂದು ಧ್ಯೇಯಕ್ಕಾಗಿ ಬಾಳಿ ಮಡಿದೆನೆಂಬ ಭಾವನೆಗಿಂದ ದೊಡ್ಡ ಸಮಾಧಾನವೇನಿದೆ?' ಎಂಬ ಪ್ರಶ್ನೆಗೆ ಉತ್ತರ ಮೈಲಾರ ಮಹಾದೇವರ ಜೀವನದ ಯಶೋಗಾಥೆಯನ್ನು ಸಿ. ವಿ. ಕೆರಿಮನಿಯವರು ಗಟ್ಟಿ ಭಾಷೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಅವಿಭಜಿತ ಧಾರವಾಡ ಜಿಲ್ಲೆಯ ಬ್ಯಾಡಗಿ ತಾಲೂಕಿನ ಮೋಟೆ ಬೆನ್ನೂರಿನ ಮಹಾದೇವ ಮಧ್ಯಮ ವರ್ಗಕ್ಕೆ ಸೇರಿದ ಕುಟುಂಬದಲ್ಲಿ ಜೂನ ೮, ೧೯೧೧ ರಂದು ಜನಿಸಿದರು.

ಮಹಾದೇವನಿಗೆ ದೇಶಾಭಿಮಾನ ತನ್ನ ತಾಯಿಯಿಂದ ಬಂದ ಬಳುವಳಿ. ಆ ವೀರಮಾತೆ ಆಜೀವಪರ್ಯಂತ ಖಾದಿಧಾರಿಯಾಗಿದ್ದಲ್ಲದೆ ಸೆರೆಮನೆವಾಸದ ಸವಿಯನ್ನು ಉಂಡವಳು. ಅಂತಹ ಆದರ್ಶ ಮಾತೆಯ ಮಗನಾದ ಮಹಾದೇವ ದೇಶಕ್ಕಾಗಿಯೇ ಪ್ರಾಣವನ್ನು ಕೊಟ್ಟ ಧೀಮಂತ. ಹಾವೇರಿಯಲ್ಲಿ 'ಮಾಡು ಇಲ್ಲವೇ ಮಡಿ' ಚಳುವಳಿಯಲ್ಲಿ ಗುಪ್ತ ಸಂಘಟನೆಯನ್ನು ಕಟ್ಟಿ ಅನೇಕ ತರುಣರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿದರು. ಇಂತವರ ಜೀವನ ಇಂದಿನ ಯುವಕರಿಗೆ ಆದರ್ಶ ಪ್ರಾಯವಾಗಿದೆ.

ಕನ್ನಡ ವಿಶ್ವವಿದ್ಯಾಲಯ ಕನ್ನಡ ಸಂಸ್ಕೃತಿಯ ಬಹುತ್ವದ ನೆಲೆಗಳನ್ನು ಹುಡುಕುವ, ಗಟ್ಟಿಗೊಳಿಸುವ, ಹರಡುವ ಕಾಯಕವನ್ನು ನೋಂಪಿಯಂತೆ ನಡೆಸಿಕೊಂಡು ಬಂದಿದೆ.* ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಕನ್ನಡವನ್ನು ವಿಶ್ವಾತ್ಮಕವಾಗಿ ಬೆಳೆಸುವ ಮತ್ತು ಅದನ್ನು ಎಲ್ಲರೂ ಒಪ್ಪುವಂತೆ ಸ್ಪಷ್ಟವಾಗಿ, ಕ್ರಮಬದ್ಧವಾಗಿ ಪ್ರಕಟಿಸುವ ಕಾರ್ಯವನ್ನು ವಿಶ್ವವಿದ್ಯಾಲಯವು ನಿರ್ವಹಿಸುತ್ತದೆ. ವಿಶ್ವವಿದ್ಯಾಲಯದ ಈ ಕಾರ್ಯ ಇನ್ನೂ ಹೆಚ್ಚಬೇಕಾಗಿದೆ. ಭಾಷೆ, ಸಾಹಿತ್ಯ, ಕಲೆ, ವಿಜ್ಞಾನ, ತಂತ್ರಜ್ಞಾನ, ರೂಪುಗೊಳ್ಳುವ ಹಾಗೂ ಪ್ರಕಟಗೊಳ್ಳುವ ಪ್ರಕ್ರಿಯೆ ನಡೆಯುತ್ತಿದೆ. ಆ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾಯವು ಕನ್ನಡದ ಮಹತ್ವದ ಲೇಖಕರನ್ನು, ಕಲಾವಿದರನ್ನು, ವಿಜ್ಞಾನಿಗಳನ್ನು ಹಾಗೂ ಸಾಹಿತ್ಯ ಮತ್ತು ಸಾಹಿತ್ಯೇತರವಾದ ಪ್ರಮುಖ ವಿಷಯಗಳನ್ನು ಕುರಿತು ಜನಸಾಮಾನ್ಯರಿಗೆ ತಿಳಿವಳಿಕೆ ನೀಡುವ ಪ್ರಸಾರೋಪನ್ಯಾಸ ಕಾರ್ಯಕ್ರಮಗಳನ್ನು ಸಂಘಟಿಸಿತ್ತಾ 'ಮಂಟಪ ಮಾಲೆ' ಎಂಬ ಶೀರ್ಷಿಕೆ ಅಡಿಯಲ್ಲಿ ಪುಟ್ಟ ಪುಟ್ಟ ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದಿದೆ.

ಸಿ. ವಿ. ಕೆರಿಮನಿಯವರು ಪ್ರಸಾರೋಪನ್ಯಾಸದಲ್ಲಿ ಭಾಗವಹಿಸಿ ಕನ್ನಡದ ಕೆಲವೇ ಕೆಲವು ಹಾಸ್ಯ ಸಾಹಿತಿಗಳಲ್ಲಿ ಒಬ್ಬರಾದ ಶ್ರೀ ಎಂ. ಎಸ್. ಸುಂಕಾಪುರ ಬಗೆಗೆ ನೀಡಿದ ಉಪನ್ಯಾಸದ ಪುಸ್ತಕ ರೂಪವೇ ಶ್ರೀ ಎಂ. ಎಸ್. ಸುಂಕಾಪುರ ವ್ಯಕ್ತಿ ಚಿತ್ರಣ. ವ್ಯಕ್ತಿ ಎಷ್ಟು ಕಾಲ ಜೀವಿಸಿದ ಎಂಬುವದಕ್ಕಿಂತ ಬದುಕಿದ್ದಷ್ಟು ಕಾಲ ಎಷ್ಟು ಸಾರ್ಥಕತೆಯಿಂದ ಇದ್ದ ಎಂಬುದು ಮುಖ್ಯ. ಇದಕ್ಕೆ ನಿದರ್ಶನವಾಗಿ ಅವನು ಕೈಕೊಂಡ ಜನೋಪಯೋಗಿ ಕಾರ್ಯಗಳು ಕನ್ನಡ ನಾಡು–ನುಡಿಗಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟು ಹಲವಾರು ವ್ಯಕ್ತಿಗಳಲ್ಲಿ ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಮುಖ್ಯಸ್ಥರಾಗಿದ್ದ ಶ್ರೀ ಎಂ. ಎಸ್. ಸುಂಕಾಪುರವರು ಪ್ರಮುಖರು.

ಚಾರಿತ್ರಿಕವಾಗಿ ಪ್ರಸಿದ್ಧ ಪಡೆದ ಗದಗ ಜಿಲ್ಲೆಯ ಮುಳುಗುಂದ ಬಾಲಲೀಲಾ ಮಹಾಂತ ಶಿವಯೋಗಿಗಳ ಪುಣ್ಯಭೂಮಿ. ನಗೆಗಾರ ನಯಸೇನನ ಊರು. ಸಣ್ಣ ಬಸಪ್ಪ ಮತ್ತು ಸಿದ್ದಮ್ಮ ದಂಪತಿಗಳ ನಾಲ್ಕನೆಯ ಮಗ ಮರಿಬಸಪ್ಪ. ಮುಳಗುಂದ, ಗದಗ, ಬೆಳಗಾವಿಯಲ್ಲಿ ಅಧ್ಯಯನ ಮಾಡಿದ ಶ್ರೀ ಎಂ. ಎಸ್. ಸುಂಕಾಪುರ ಬೆಳಗಾವಿ ಲಿಂಗರಾಜ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿ,

---

* ಬಿ. ಎ. ವಿವೇಕ ರೈ : ಬಯಲನು ತುಂಬುವ ಆಲಯದ ಬೆಳಕಿನ ಬೀಜಗಳು.

ಅಲ್ಲಿಯೇ ಉಪನ್ಯಾಸಕರಾಗಿ ವೃತ್ತಿ ಆರಂಭಿಸಿದರು. ಕನ್ನಡದ ಹೆಸರಾಂತ ಸಂಶೋಧಕ ಡಾ. ಆರ್. ಸಿ. ಹಿರೇಮಠರರ ಸಂಪರ್ಕದಿಂದಾಗಿ ಸಾಹಿತ್ಯದ ಕಡೆಗೆ ಆಕರ್ಷಿತರಾದರು. ಡಾ. ಎಂ. ಎಸ್. ಸುಂಕಾಪುರ ಮತ್ತು ಶ್ರೀ ಆರ್. ಸಿ. ಹಿರೇಮಠರಿಬ್ಬರೂ ಒಡಲೆರಡು ದೇಹ ಒಂದೇ ಎನ್ನುವಂತವರು. ಶ್ರೀ ಎಂ. ಎಸ್. ಸುಂಕಾಪುರ ಬಗೆಗೆ ಶ್ರೀ ಆರ್. ಸಿ. ಹಿರೇಮಠರಿಗೆ ಒಳ್ಳೆಯ ಅಭಿಪ್ರಾಯವಿತ್ತು. ಪ್ರಸ್ತುತ ಕೃತಿಯಲ್ಲಿ ಸಿ. ವಿ. ಕೆರಿಮನಿಯವರು ಶ್ರೀ ಎಂ. ಎಸ್. ಸುಂಕಾಪುರವರ ಬಗೆಗೆ ಅವರ ಬಂಧುಗಳು, ಕುಟುಂಬದವರು, ಸ್ನೇಹಿತರ ಅಭಿಪ್ರಾಯಗಳನ್ನು ಸಂಕಲಿಸಿ ಕೊಡುವ ಪ್ರಯತ್ನ ಮಾಡಿದ್ದಾರೆ. ಜೊತೆಗೆ ಶ್ರೀ ಎಂ. ಎಸ್. ಸುಂಕಾಪುರ ಸಾಹಿತ್ಯ ಸೇವೆಯ ಸಂಕ್ಷಿಪ್ತ ವಿವರಣೆಯನ್ನು ಕೂಡಾ ನೀಡಿದ್ದಾರೆ.

ಡಾ. ಎಂ. ಎಸ್. ಸುಂಕಾಪುರರವರು ಗ್ರಾಮೀಣ ಬದುಕಿನಲ್ಲಿ ಹುಟ್ಟಿ ಬೆಳೆದವರು. ಅವರ ನೋವು ನಲಿವುಗಳನ್ನು ಅರಿತವರು. ಜನಪದಕ್ಕಾಗಿಯೇ ತಮ್ಮ ಬದುಕನ್ನೇ ಮೀಸಲಾಗಿಟ್ಟವರು. ಕವಿರಾಜಮಾರ್ಗಕಾರ ಕನ್ನಡಿಗರ ಬಗೆಗೆ 'ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣಿತ ಮತಿಗಳ್' ಹೇಳಿದಂತೆ ನಮ್ಮ ಜನಪದರ ಸಾಹಿತ್ಯವನ್ನು ಕುರಿತೇ ಹೇಳಿರಬೇಕು. ಶ್ರೀ ಎಂ. ಎಸ್. ಸುಂಕಾಪುರರವರು ತಮ್ಮ 'ಜೀವನ ಜೋಕಾಲಿ' ಸಂಪುಟಗಳಲ್ಲಿ ಉತ್ತರ ಕರ್ನಾಟಕದ ಎಲ್ಲ ಜನಪದ ಸಾಹಿತ್ಯ ಪ್ರಕಾರಗಳನ್ನು ಸಂಕಲಿಸುವ ಕೆಲಸ ನಿರ್ವಹಿಸಿದ್ದಾರೆ. ಅವುಗಳ ಸಂಕ್ಷಿಪ್ತ ವಿವರಣೆಯ ಜೊತೆಗೆ ಅವುಗಳ ಮೌಲ್ಯವನ್ನು ಸಿ. ವಿ. ಕೆರಿಮನಿಯವರು ಪ್ರಚುರ ಪಡಿಸಲು ಪ್ರಯತ್ನಿಸಿದ್ದಾರೆ. ಶ್ರೀ ಎಂ. ಎಸ್. ಸುಂಕಾಪುರರ ನಾಟಕ ಸಾಹಿತ್ಯ ಹಾಗೂ 'ಕನ್ನಡ ಸಾಹಿತ್ಯದಲ್ಲಿ ಹಾಸ್ಯ' ವಿಷಯವಾಗಿ ಸಿದ್ಧಪಡಿಸಿದ ಸಂಪ್ರಬಂಧದ ಬಗೆಗೂ ಕೃತಿಯಲ್ಲಿ ವಿವರಣೆ ಇದೆ. ಒಟ್ಟಾರೆಯಾಗಿ ಸಿ. ವಿ. ಕೆರಿಮನಿಯವರು ಕನ್ನಡಿಯಲ್ಲಿ ಕರಿಯನ್ನು ಕಾಣಿಸುವಂತೆ ಚಿಕ್ಕ ಪುಸ್ತಕದಲ್ಲಿ ಶ್ರೀ ಎಂ. ಎಸ್. ಸುಂಕಾಪುರರ ಬಗೆಗೆ ವಿಸ್ತೃತ ಮಾಹಿತಿ ಒದಗಿಸಿದ್ದಾರೆ. ಹಾಸ್ಯ ಬರಹಗಾರರಾಗಬೇಕೆನ್ನುವವರಿಗೆ ಸುಂಕಾಪುರ ಒಬ್ಬ ಮಾದರಿ ಸಾಹಿತಿ ಎನ್ನುವ ಅರ್ಥದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

## ೪.೩. ಶರಣರ ವ್ಯಕ್ತಿ ಚಿತ್ರಣಗಳು :

೧೨ನೇ ಶತಮಾನದಿಂದ ೨೦ನೇ ಶತಮಾನದವರೆಗೆ ತಮ್ಮ ಅಪೂರ್ವ ಜೀವನದಿಂದ ಸಾಮಾಜಿಕ, ಧಾರ್ಮಿಕ ಸುಧಾರಣೆಗೈದ ದಿವ್ಯ ಶರಣರನ್ನು ಕುರಿತು ಸಿ. ವಿ. ಕೆರಿಮನಿಯವರು ತಮ್ಮ 'ಶರಣರ ಕಣಜ'ದಲ್ಲಿ ವಿಭಾಗದಲ್ಲಿ ಪರಿಚಯಿಸಿದ್ದಾರೆ. ಛಲದಂಕ ಭಕ್ತಿ ಶ್ರೇಷ್ಠ ಆದಯ್ಯನಿಂದ ಹಿಡಿದು ಮುಂಡರಗಿ ಶ್ರೀ ಅನ್ನಧಾನಿ ಜಗದ್ಗುರುಗಳವರೆಗೆ ಸುಮಾರು ೧೭ ಜನ ಶಿವಯೋಗಿಗಳ ಸ್ಥಲ ಪರಿಚಯ ಇಲ್ಲಿದೆ. ಸಿ. ವಿ. ಕೆರಿಮನಿಯವರು ಆರಿಸಿಕೊಂಡಿರುವ ಒಬ್ಬೊಬ್ಬ ಶರಣರೂ ಲೋಕಜೀವ ಸುಧಾರಣೆಗೆ ತಮ್ಮನ್ನು ತಾವು ಸವೆಸಿಕೊಂಡವರು. ಲೇಖಕರು ಕೆಲವು ಶರಣರ ಬದುಕಿನಲ್ಲಿ ಬರುವ ಪ್ರಸಂಗಗಳನ್ನು ಪ್ರಸ್ತಾಪಿಸಿದ್ದಾರೆ. ಆ ಪ್ರಸಂಗಗಳೇ ನಮ್ಮ ಬದುಕಿಗೆ ಮೌಲಿಕ ಸಂದೇಶ

ನೀಡುವಂತಿವೆ. ಈ ವಿಭಾಗದಲ್ಲಿ 'ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು' ಲೇಖನ ಈಗಿನ ವೀರಶೈವ ಸಮಾಜ ಸಂಘಟಕರಿಗೆ ದಾರಿದೀಪವಾಗಿದೆ. ನಾಡಿನ ಎಲ್ಲ ಭಾಗಗಳಿಗೂ ಅಷ್ಟಾಗಿ ಪರಿಚಯವಿಲ್ಲದ ಗುಡಿಸಾಗರದ ಸಾಧು ಸಿದ್ಧಶಿವಯೋಗಿಗಳು, ಸಮರ್ಥ ಕಲ್ಮೇಶ್ವರ ಮಹಾರಾಜರು, ಗೊಬ್ಬರಗುಂಪಿಯ ರೇವಣಸಿದ್ಧೇಶ್ವರರು, ಇಂತಹ ಅನುಭಾವಿಗಳನ್ನು ಲೇಖಕರು ಪರಿಚಯ ಮಾಡಿಕೊಟ್ಟು ಉಪಕರಿಸಿದ್ದಾರೆ.[೬] ಒಟ್ಟಿನಲ್ಲಿ ಓದುಗರಿಗೆ ವಚನಾಮೃತದ ಸವಿಯನ್ನು ಉಣಿಸಿದ್ದಾರೆ.

'ಶರಣರ ಕಣಜ'ದ ಮೊದಲ ಲೇಖನ ಛಲದಂಕ ಭಕ್ತಶ್ರೇಷ್ಠ ಆದಯ್ಯನ ಕುರಿತಾಗಿದ್ದು, ಇದು ಚಿತ್ಪ್ರಭೆ ಎಂಬ ಅಭಿನಂದನ ಗ್ರಂಥದಲ್ಲಿ ೧೯೭೨ ರಲ್ಲಿ ಪ್ರಕಟಗೊಂಡಿದೆ.

ಸೌರಾಷ್ಟ್ರದಲ್ಲಿ ಜನಿಸಿ, ಕರ್ನಾಟಕದಲ್ಲಿ ಬೆಳೆದು, ಆಧ್ಯಾತ್ಮದ ಅನುಭವದ ಸೌರಭವನ್ನು ಬೀರಿ, ನಿರ್ಮಲವಾದ, ಪರಿಶುದ್ಧವಾದ ಬಾಳನ್ನು ಬಾಳಿ ಶಿವನ ಸಾನಿಧ್ಯವನ್ನು ಪಡೆದ ಶರಣ ಶ್ರೇಷ್ಠ ಆದಯ್ಯನ ಪರಿಚಯ ಇಲ್ಲಿ ಗಮನಾರ್ಹವಾಗಿ ನಿರೂಪಿತವಾಗಿದೆ.

ಲೇಖಕರು ಆದಯ್ಯನ ಚರಿತ್ರೆಯನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿ ಕ್ರೋಢಿಕರಿಸಿರುವುದು ತಿಳಿದು ಬರುತ್ತದೆ. ಹರಿಹರನ ಆದಯ್ಯನ ರಗಳೆ, ರಾಘವಾಂಕನ ಸೋಮನಾಥ ಚಾರಿತ್ರೆ ಮತ್ತು ಇತರ ಲೇಖನಗಳ ಆಧಾರದಿಂದ ಆತನ ಕಾಲ ಮತ್ತು ಸ್ಥಳಗಳ ಮಾಹಿತಿ ನೀಡಿದ್ದಾರೆ. ಹುಲಿಗೆಯ ಬಸದಿಯಲ್ಲಿ ಸೋಮಯ್ಯನನ್ನು ಪ್ರತಿಷ್ಠಾಪನೆ ಮಾಡುವ ಪೂರ್ವದಲ್ಲಿ ನಡೆದ ಸನ್ನಿವೇಶಗಳನ್ನು ಸಂಕ್ಷಿಪ್ತದಲ್ಲಿ ವಿವರಿಸಿದ್ದಾರೆ.

ಹಾಗೆಯೇ ಸೋಮನಾಥನನ್ನು ಪ್ರತಿಷ್ಠಾಪಿಸಿದ ಕುರಿತು ಲೇಖಕರು ಉಲ್ಲೇಖ ನೀಡಿದ್ದಾರೆ. ಆದಯ್ಯನ ನಿಷ್ಠೆಯ ಹೋರಾಟವು ಅವನ ಅನುಭಾವ ಜೀವನಕ್ಕೆ ತಳಹದಿಯಾಗಿದ್ದಿತು. ಆತ ಅಸತ್ಯ ಅನ್ಯಾಯಗಳ ವಿರುದ್ಧ ಸತತ ಹೋರಾಟ ನಡೆಸಿದ್ದಾನೆ.

**"ಅಂಗವಿಲ್ಲದೆ ಕೂಟ ಸಮರಸದಿಲ್ಲವ ಬೇಟಿ**
**ಸಮರತಿಯಿಲ್ಲದ ಆನಂದ ಸನ್ನಿಹಿತವಾಯಿತ್ತೆನಗೆ.............."**

ಎನ್ನುವಲ್ಲಿ ಶಿವನಿಲ್ಲದೆ ಆನಂದ ಹೊಂದಲಾರೆನು ಎಂಬ ಕಲ್ಪನೆಯಿತ್ತು. ಹೋರಾಟದಲ್ಲಿ ಶಕ್ತಿಯ ಸೊಬಗನ್ನರಿತ ಆದಯ್ಯನಿಗೆ ಯಾವುದನ್ನು ಹೇಳಿದರೂ ಅರ್ಥವತ್ತಾಗಿ ಹೇಳುವ ಕಲೆ ಕರಗತವಾಗಿತ್ತು ಎಂಬ ಅಭಿಪ್ರಾಯ ಲೇಖಕರದಾಗಿದೆ.

---

೬. 'ಕಣಜ' – ಮುನ್ನುಡಿ : ಗೋ. ರು. ಚನ್ನಬಸಪ್ಪ (೧೫–೦೧–೨೦೦೦)

ಪಂಚಾಕ್ಷರಿ ಮಂತ್ರದ ಮಹಿಮೆ ಕುರಿತು

**"ತ ವರ್ಗದ ಕಡೆಯಲಿದೆ ಪ ವರ್ಗದ ಅಂತ್ಯದಲ್ಲಿದೆ**
**ಶ ವರ್ಗದ ಮೊದಲಲಿದೆ ಯ ವರ್ಗದ ತುದಿ ಮೊದಲಲಿದೆ**..............."

ಪಂಚಾಕ್ಷರಿ ಮಂತ್ರವನ್ನು ಬಾಹ್ಯದಲ್ಲಿ ಉಚ್ಚರಿಸಲಾಗದೆಂದು ತಿಳಿದು ಅದನ್ನು ವರ್ಣಮಾಲೆಯ ಮುಖಾಂತರ ತಿಳಿಸಿ ಕೃತಕೃತ್ಯನಾಗಿದ್ದಾನೆ ಎಂದು ಹೇಳಿದ ಲೇಖಕರು, ಆದಯ್ಯನು ಲೌಕಿಕ ಉದಾಹರಣೆ ಕೊಡುವಲ್ಲಿಯೂ ಮೇಲುಗೈ ಸಾಧಿಸಿದ್ದನ್ನು ಉದಾಹರಿಸಿದ್ದಾರೆ.

**"ಕತ್ತೆಗೆ ಕರ್ಪುರ ಯೋಗ್ಯವೇ?**
**ಮರ್ಕಟಂಗೆ ಮುಕುರ ಸಾಧ್ಯವೇ?**

ಇಂತಹ ಸಾವಿರಾರು ವ್ಯವಹಾರಿಕ ಉದಾಹರಣೆಗಳೊಂದಿಗೆ ಧರ್ಮದ ವಿವರಣೆ ನೀಡುತ್ತಾ ಲೋಕದ ಕೊಳೆಯನ್ನು ತೊಳೆಯುವುದಕ್ಕಾಗಿ ಹಗಲಿರುಳು ಚಿಂತಿಸಿದ ವ್ಯಕ್ತಿ ಇತನು ಎಂದು ಲೇಖಕರು ಆದಯ್ಯನ ಗುಣಗಾನ ಮಾಡಿದ್ದಾರೆ.

ಅದೇ ರೀತಿಯಾಗಿ ೧೯೮೯ ರಲ್ಲಿ 'ಜ್ಞಾನದೇಗುಲ' ಪುಟ್ಟರಾಜ ಗವಾಯಿಗಳ ಅಭಿನಂದನ ಗ್ರಂಥದಲ್ಲಿ 'ಅಕ್ಕಮಹಾದೇವಿಯ ಪುರಾಣ' ಎಂಬ ಲೇಖನ ಪ್ರಕಟಗೊಂಡಿದೆ. ಲೇಖಕರು ಅಕ್ಕಮಹಾದೇವಿಯ ವಿಶಿಷ್ಟ ಪೂರ್ಣವಾದ ದಾರಿಯ ಕುರಿತು ಇಲ್ಲಿ ಬೆಳಕು ಚೆಲ್ಲಿದ್ದಾರೆ. ಇಡೀ ಜಗತ್ತಿನ ಸ್ತ್ರೀ ಸಮುದಾಯದಲ್ಲೇ ಅಕ್ಕಮಹಾದೇವಿ ವಿಶಿಷ್ಟಸ್ಥಾನ ಗಳಿಸಿದ್ದಾಳೆ. ಅದಕ್ಕೆ ಕಾರಣ ಅವಳ ಅಲೌಕಿಕ ಮಾರ್ಗ. ಅದಕ್ಕಾಗಿ ಅವಳ ಬದುಕಿನ ರೀತಿ ನೀತಿ ಜಗಕ್ಕೆ ಭ್ರಮೆಯೆನಿಸಿತು. ಹಾಗೂ ಸಾಧನೆಯಿನಿಸಿತು ಎಂದು ವಿಶ್ಲೇಷಣೆಗೈದಿದ್ದಾರೆ.

ಅಕ್ಕ ಮಹಾದೇವಿಯ ವಿಶಿಷ್ಟ್ಯತೆಯ ಕುರಿತು ಬರೆದ ವಿವಿಧ ಲೇಖಕರ ಕೃತಿಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಹರಿಹರ ಕವಿಯ 'ಅಕ್ಕಮಹಾದೇವಿಯ ರಗಳೆ', ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರು 'ಕದಳಿಯ ಕರ್ಪುರ' ಕಾದಂಬರಿ, ಡಾ. ಬಸವರಾಜ ಕಟ್ಟಿಮನಿಯವರ 'ಗಿರಿಯ ನವಿಲು' ಕಾದಂಬರಿ ಹಾಗೂ ಶ್ರೀ ಭೂಸನೂರಮಠರವರ 'ಭವ್ಯಮಾನವ' ಕಾವ್ಯ ಉಲ್ಲೇಖಾರ್ಹ ಕೃತಿಗಳೆಂದು ತಿಳಿಸಿದ್ದಾರೆ. ಡಾ. ಪುಟ್ಟರಾಜ ಕವಿಗಳು ರಚಿಸಿದ 'ಉಡುತಡಿಯ ಅಕ್ಕಮಹಾದೇವಿ ಪುರಾಣ'ವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಒಂಬತ್ತು ಸಂಧಿಗಳಲ್ಲಿ ಹಬ್ಬಿದ ಈ ಕಾವ್ಯ ನಿರೂಪನಾ ತಂತ್ರ ಮತ್ತು ಕಾವ್ಯ ಪ್ರಯೋಗದಲ್ಲಿ ಲೇಖಕರು ಸೊಬಗನ್ನು ಕಂಡಿದ್ದಾರೆ. ಜೊತೆಗೆ 'ಕದಳಿ ಕರ್ಪುರ', 'ಭವ್ಯ ಮಾನವ' ಕೃತಿಗಳೊಂದಿಗೆ 'ಅಕ್ಕಮಹಾದೇವಿ ಪುರಾಣ'ವನ್ನು ತುಲನಾತ್ಮಕವಾಗಿ ಹೋಲಿಸಿದ್ದಾರೆ.

ಅಕ್ಕಮಹಾದೇವಿಯ ರೂಪಕ್ಕೆ ಮಾರು ಹೋಗಿ ಮನವೊಡ್ಡಿ ನಿಂತ ರಾಜನನ್ನು ವರಿಸಿ ಮಹಾರಾಣಿಯಾಗಿ ಮೆರೆಯಬಹುದಾಗಿದ್ದ ಮಹಾದೇವಿ 'ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು' ಎಂದು ಹೇಳಿ ಲೌಕಿಕ ಜಗತ್ತಿಗೆ ಕಾಣಲಾರದ ತನ್ನ ಆ ಗಂಡನಿಗಾಗಿ ಅಂಗಲಾಚುತ್ತಾ ಹದಿಹರೆಯದಲ್ಲಿ ಬೆತ್ತಲಾಗಿ ನಡೆದ ಸನ್ನಿವೇಶ ಕಲ್ಪನೆ ನಿಜಕ್ಕೂ ವಿಚಿತ್ರವೆಂದ ಲೇಖಕರು, ಅಲ್ಲಿ ಸೇರಿದ ನೂರಾರು ಜನ ಭವಿಗಳಿಗೆ, ಭಕ್ತರಿಗೆ ಅವರವರ ತೆರನಾಗಿ ಅಕ್ಕ ಕಂಡ ಸನ್ನಿವೇಶವನ್ನು –

**"ಈ ಶರಣೆಯಂ ನೋಡಿ ಕೆಲವರು ಹುಚ್ಚಳೆನ್ನುತ್ತಾ**
**ಲೀ ಶರಣೆಯಂ ನೋಡಿ ಕೆಲವರು ಜ್ಞಾನಿಯೆನ್ನುತ್ತಾ**
**ಲೀ ಶರಣೆಯಂ ನೋಡಿ ಕೆಲವರು ಕಣ್ಮುಚ್ಚುತ್ತೆ ಕೆಲರು ವಂದಿಸುತಿರ್ದರು**
**ಈ ಶರಣೆಯಂ ನೋಡಿ ಕೆಲರು ನಿಂದಿಸುತಿರುವ**
**ಲೀ ಶರಣೆಯಂ ನೋಡಿ ಕೆಲರು ಬಣ್ಣಿಸುತಿರುವ**
**ಲೀ ಶರಣೆಯಂ ನೋಡಿ ಕೆಲರು ಪ್ರಶ್ನಿಸುತ್ತಿರುವರವರ ತೆರನಿರುವಳು"**

ಎಂಬ ಪದ್ಯದ ಮೂಲಕ ಕವಿ ಸೊಗಸಾಗಿ ವರ್ಣಿಸಿದ್ದನ್ನು ಉದಾಹರಿಸಿದ್ದಾರೆ.

ಒಟ್ಟಾರೆಯಾಗಿ ಒಂದು ಸಾತ್ವಿಕ ಬದುಕಿನ ಸಾಧನೆಯನ್ನು ಸರಳವಾದ ಲಲಿತವಾದ ಶೈಲಿಯಲ್ಲಿ ನಿರೂಪಿಸಿದ ಒಂದು ಯಶಸ್ವಿ ಕೃತಿ 'ಅಕ್ಕಮಹಾದೇವಿ ಪುರಾಣ' ಎಂಬ ಅಭಿಪ್ರಾಯ ಪ್ರೋ. ಸಿ. ವಿ. ಕೆರಿಮನಿಯವರದು.

ಹುಬ್ಬಳ್ಳಿಯ 'ಪರಂಜ್ಯೋತಿ' ಪತ್ರಿಕೆಯಲ್ಲಿ ಪ್ರಕಟವಾದ ಒಂದು ಸುದೀರ್ಘ ಲೇಖನ 'ಶೂದ್ರ ಪ್ರತಿನಿಧಿ ಸಿದ್ಧರಾಮ'.

ಮಹಾಕವಿ ರಾಘವಾಂಕನ ಕಾವ್ಯದ ಸಾಲುಗಳಿಂದ ಪ್ರಾರಂಭವಾಗುವ ಈ ಲೇಖನ ಸೊನ್ನಲಿಗೆ ಸಿದ್ಧರಾಮನ ಜನನ, ಬಾಲ್ಯಗಳನ್ನು ಹಾಗೂ ಆತನ ಕುರಿತಾದ ದಂತ ಕಥೆಗಳನ್ನು ಸವಿವರವಾಗಿ ದಾಖಲಿಸುತ್ತಾ ಮುಂದುವರಿದೆ. ಸಿದ್ಧರಾಮ ಶಿವಯೋಗಿಯ ಅಂದಿನ ಸಮಾಜ ಸೇವೆ ಕಾರ್ಯದ ವಿಶೇಷತೆಯನ್ನು ಲೇಖನ ಬಿಡಿಸಿ ಹೇಳಿದ್ದಾರೆ. ಸಿದ್ಧರಾಮನ ಜೀವನದ ವಿವಿಧ ಘಟ್ಟಗಳನ್ನು ಹಾಗೂ ಕಲ್ಯಾಣದಲ್ಲಿ ನಡೆಯುತ್ತಿದ್ದ ಅನುಭಾವ ಗೋಷ್ಠಿಗಳು, ಶರಣರ ಧಾರ್ಮಿಕ ಪ್ರಜ್ಞೆಯ ಜಾಗೃತಿಯನ್ನು ಕುರಿತು ಉಲ್ಲೇಖಿಸಿದ್ದಾರೆ. ಹನ್ನೆರಡನೆಯ ಶತಮಾನದ ಶಿವಶರಣರಲ್ಲಿಯೇ ಅತಿ ಹೆಚ್ಚಿನ ಸಂಖ್ಯೆಯ ಶಾಸನಗಳಲ್ಲಿ, ಎಂದರೆ ಸುಮಾರು ೨೨ ಶಾಸನಗಳಲ್ಲಿ, ಸಿದ್ಧರಾಮ ಶಿವಯೋಗಿಯ ಉಲ್ಲೇಖ ಕಂಡುಬರುವುದನ್ನು ತಿಳಿಸಿದ್ದಾರೆ.

ಒಟ್ಟಾರೆಯಾಗಿ ಸಿದ್ಧರಾಮ ಶಿವಯೋಗಿಯು ಸಮಾಜ ಸೇವೆಯಲ್ಲಿ ಈಶಸೇವೆ ಕಂಡನು, ಶೂದ್ರರ ನಗುವಿನಲ್ಲಿ ತನ್ನ ಸಂತೋಷ ಕಂಡನು. ನಿಸ್ವಾರ್ಥವಾದ ಸೇವೆಯಿಂದ ಇಂದಿಗೂ ನಮಗೆ ಆದರ್ಶವಾಗಿದ್ದಾನೆ ಎಂದು ಅಭಿಪ್ರಾಯಪಟ್ಟಿದ್ದಾರೆ.

೧೯೭೭ ನೇ ವರ್ಷ ಬೆಂಗಳೂರು ವಿಶ್ವವಿದ್ಯಾಲಯದವರು ಪ್ರಕಟಿಸಿದ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಎಂಬ ಲೇಖನ ಪ್ರಕಟಿಸಿದ್ದಾರೆ. ಇದರಲ್ಲಿ ಲಕ್ಕಣ ದಂಡೇಶ ಕುರಿತ ವಿಷಯ 'ಕಣಜ'ದಲ್ಲಿ ಸಂಗ್ರಹಗೊಂಡಿದೆ. ಸಿ. ವಿ. ಕೆರಿಮನಿಯವರು ಆತನನ್ನು ತಮ್ಮ ಪ್ರಾರಂಭದ ಸಾಲುಗಳಲ್ಲಿ ಆತನ ಹಿರಿತನ, ಸಿರಿತನದ ಮೇರುವ್ಯಕ್ತಿತ್ವವನ್ನು ಕಟ್ಟಿಕೊಟ್ಟಿದ್ದನ್ನು ಲೇಖಕರ ಪ್ರತಿಭಾಶಕ್ತಿಯ ಧ್ಯೋತಕವೆನಿಸಿದೆ. ಅದು ಹೀಗಿದೆ.

ಶಿವತತ್ವ ಚಿಂತಾಮಣಿಯ ಕರ್ತೃವಾಗಿ, ಪ್ರೌಢದೇವರಾಯನ ಮಹಾಪ್ರಧಾನಿಯಾಗಿ, ವೈರಿಗಳಿಗೆ ಸಿಂಹಸ್ವಪ್ನವಾಗಿ ರಣಸಿಂಗನಾಗಿ, ಧರ್ಮಪ್ರಚಾರದಲ್ಲಿ ವೀರಶೈವ ತತ್ವ ಪ್ರದೀಪಕನಾಗಿ, ಗೀತಬೋಧೆಯಲ್ಲಿ ಆಚಾರ್ಯನಾಗಿ, ರಾಜಕಾರಣದಲ್ಲಿ ಮುತ್ಸದ್ಧಿಯಾಗಿ, ಪ್ರಜಾನುರಾಗಿಯಾಗಿ, ಶಿವಶರಣರ ಹೃದಯ ಚಿಂತಾಮಣಿಯಾಗಿ, ಶಿವಭಕ್ತ ಸಂಪನ್ನನಾಗಿ 'ಶರಣರ ಚರಣಾಂಬುಜಕ್ಕೆ ಶರಣು' ಎನ್ನುವ ಈ ಲಕ್ಕಣ ದಂಡೇಶನು ೧೫ನೇ ಶತಮಾನದಲ್ಲಿ ವೀರಶೈವ ತತ್ವಶಾಸ್ತ್ರ ಪ್ರತಿಪಾದಕನಾಗಿ ಕವಿಯೂ ಮತ್ತು ಕಲಿಯೂ ಆಗಿ ಮೆರೆದ ಗ್ರಂಥಕಾರ ಎಂದು ಎಳೆ ಎಳೆಯಾಗಿ ಪ್ರತಿಪಾದಿಸಿದ್ದಾರೆ.

ಲೇಖಕರು ಲಕ್ಕಣ ದಂಡೇಶನ ಮಾಹಿತಿಯನ್ನು ಶಾಸನಗಳ ಉಲ್ಲೇಖ ಹಾಗೂ ವಿವಿಧ ಕೃತಿರತ್ನಗಳ ಉಲ್ಲೇಖದೊಂದಿಗೆ ಬಿಡಿಬಿಡಿಯಾಗಿ ತೋರಿಸಿದ್ದಾರೆ. ಈ ವಿಸ್ತಾರವಾದ ಲೇಖನದಲ್ಲಿ ಸಿ. ವಿ. ಕೆರಿಮನಿಯವರ ಓದಿನ ಆಳ ವಿಸ್ತಾರದ ಅರಿವು ನಮಗಾಗುತ್ತದೆ. ಲಕ್ಕಣ ದಂಡೇಶನ 'ಶಿವತತ್ವ ಚಿಂತಾಮಣಿ'ಯ ಹಿರಿಮೆ, ಸೊಗಸನ್ನು ವಿಶಿಷ್ಟವಾಗಿ ಲೇಖಕರು ಉದಾಹರಣೆಯೊಂದಿಗೆ ಕುತೂಹಲ ಮಾಡುವ ರೀತಿ ವಿವರಿಸಿದ್ದಾರೆ.

ಮುಂಡರಗಿಯ ಅನ್ನದಾನೀಶ್ವರ ಮಠದಲ್ಲಿ ಏರ್ಪಡಿಸಲಾದ ವಿಶೇಷ ಉಪನ್ಯಾಸ ಮಾಲೆ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಎಂಬುದಾಗಿದೆ.

ನಾಡಿನ ತುಂಬಾ ಸಂಚರಿಸಿ ಸುಮಾರು ೭೦೦೦ಕ್ಕೂ ಮಿಕ್ಕಿ ತಾಡೋಲೆಯ ಕಟ್ಟುಗಳನ್ನು ಸಂಗ್ರಹಿಸಿ ಅವುಗಳನ್ನು ಶಿವಯೋಗ ಮಂದಿರದಲ್ಲಿ ಇರಿಸಿ ಅದರಲ್ಲಿದ್ದ ಶರಣ ಸಾಹಿತ್ಯವನ್ನು ಪೋಷಿಸಿ ಬೆಳೆಸಿದ ಕೀರ್ತಿ ಇವರದು. ಲೇಖಕರು ಶ್ರೀಗಳ ಸತ್ಯ ಶುದ್ಧ ಕಾಯಕ ಜೀವನವನ್ನು ಕುರಿತು ಅವರ ಪ್ರಮುಖ ಉಪಯುಕ್ತ ಕೆಲಸ ಕಾರ್ಯಗಳನ್ನು ಹೆಸರಿಸುತ್ತಾ ವಿವರಿಸುವ ರೀತಿ ಮನಮುಟ್ಟುವಂತಿದೆ.

ಹಾನಗಲ್ಲ ಶ್ರೀಗಳವರಿಗೆ ಸಮಾಜ, ಸಂಸ್ಕೃತಿ, ಶಿವಯೋಗಿಗಳ ಮೇಲೆ ಆಸಕ್ತಿ ಇರುವಂತೆ ಸಾಹಿತ್ಯದ ಮೇಲೂ ಆಸಕ್ತಿ ಇದ್ದಿತು ಎಂದು ಹೇಳುತ್ತಾ ಶ್ರೀಗಳ ಸಾಹಿತ್ಯದ ಪೋಷಣೆಯ ಪಟ್ಟಿ ನೀಡಿದ್ದಾರೆ.

೧. ತಾಡೋಲೆಗಳ ಸಂಗ್ರಹ
೨. ಗ್ರಂಥಗಳ ಸಂಶೋಧನೆ ಮತ್ತು ಪ್ರಕಟಣೆ
೩. ಪತ್ರಿಕೆಗಳ ಪ್ರಕಟಣೆ
೪. ವೀರಶೈವ ಪಂಡಿತರಿಗೆ ಸಹಾಯ ಸಹಕಾರ.
೫. ವ್ಯಾಖ್ಯಾನ – ಪುರಾಣ, ಶಿವಕೀರ್ತನ ಪ್ರವಚನಗಳು

ಇವು ಶ್ರೀಗಳ ಪಂಚತತ್ವಗಳು, ಒಂದು ರೀತಿಯಲ್ಲಿ ಶ್ರೀಗಳು ಶರಣ ಸಾಹಿತ್ಯದ ಚಲಿಸುವ ವೀರಶೈವ ವಿಶ್ವಕೋಶವಾದರು ಎಂಬ ಅಂಶವನ್ನು ಸಿ. ವಿ. ಕೆರಿಮನಿಯವರು ವಿಶೇಷ ಒತ್ತು ನೀಡಿ ಉಲ್ಲೇಖಿಸಿದ್ದಾರೆ.

**"ಬಾಲ ಬಂದ ನೀ ಇಳೆಗೆ ಶಿವಭಕ್ತರ ಬಳಿಗೆ**
**ಬಾಲ ಬಂದ ಶಿವಲೀಲೆಯ ಮಾಡಿ**
**ಶೂಲಿಯ ಭಕ್ತ ಶಿವಪುರಕೊಯ್ಯೆ"**

ಎಂದು ತಮ್ಮ 'ಕೈವಲ್ಯ ದರ್ಪಣ'ದಲ್ಲಿ ಹಾಡಿದ 'ಬಾಲಲೀಲಾ ಮಹಾಂತ ಶಿವಯೋಗಿಗಳು ಕುರಿತು ಲೇಖನ 'ಘನಶ್ರೀ' ಘನಮಠದ ಶಿವಯೋಗಿಗಳ ಅಭಿನಂದನ ಗ್ರಂಥ ಸಂತೆಕೆರೂರು ೧೯೮೭ ರಲ್ಲಿ ಪ್ರಕಟಗೊಂಡಿದೆ.

**"ಹರಪೂಜೆ ಗುರುಸೇವೆ ವರಪುಣ್ಯವಿಲ್ಲದೆ**
**ಬರಿದೆ ಸುಖ ಭೋಗ ದೊರಕುವದುಂಟೇ ಆತ್ಮ........**
**ಹಣವಿದ್ದಾಗಲೇ ಭಕ್ತಿ ನೆಣವಿರ್ದಾಗಲೇ ಸೇವೆ**
**ಗುಣವಿರ್ದಾಗಲೇ ಮಾಡಿ ಮುಕ್ತಿ ಪಡೆಯಾತ್ಮಾ........"**

ಎಂದು ಅಧ್ಯಾತ್ಮಿಕ ಅನುಭೂತಿಯನ್ನು ದರ್ಶಿಸಿದ 'ಕೈವಲ್ಯ ದರ್ಪಣದ' ಹರಿಕಾರ ಬಾಲಲೀಲಾ ಮಹಾಂತ ಶಿವಯೋಗಿಗಳು ತಾವು ದೊಡ್ಡವರಾದರೂ ಬಾಲ ಭಾವನೆಯಿಂದಲೇ ಇರುವುದು ಅವರ ವಾಡಿಕೆಯಾಗಿದೆ. ಅವರ ಇರುವಿಕೆಯೇ ಜನರಿಗೊಂದು ಆದರ್ಶದ ಬದುಕಾಗಿತ್ತು. ಅವರು ಧನಕನಕಾದಿಗಳಿಗೆ ಆಸೆ ಪಡಲಿಲ್ಲ. ಕೀರ್ತಿ ಪ್ರಚಾರಗಳಿಗೆ ಕರುಬಲಿಲ್ಲ. ಜನತೆಯ ಉದ್ದಾರಕ್ಕಾಗಿ ನಿಮ್ಮ ಬಳಿಗೆ ಬಂದಿರುವೆ, ನಿಮ್ಮನ್ನು ಕೈಲಾಸಕ್ಕೆ ಕರೆದೊಯ್ಯುವೆ ಎಂದು ಹೇಳುವುದರೊಂದಿಗೆ ಮುಕ್ತಾಯವಾಗುವುದನ್ನು ಲೇಖಕರು ಲೇಖನದ ಮುಕ್ತಾಯವನ್ನು ಮಾಡಿದ್ದಾರೆ.

ಜೂನ್ ೧೦, ೧೯೯೫ ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದ ಲೇಖನ 'ಚಳ್ಳಗುರಿಕಿ ಶ್ರೀ ಎರ್ರಿಸ್ವಾಮಿಗಳು' ಸಿ. ವಿ. ಕೆರಿಮನಿಯವರು ಬಳ್ಳಾರಿ ಜಿಲ್ಲೆಯ ಚಳ್ಳಗುರಿಕಿಯ ಶ್ರೀಗಳ ದರ್ಶನವನ್ನು ಸ್ವತಃ ಪಡೆದು ದಿವ್ಯಾನಂದದ ಸ್ವಾನುಭವವನ್ನುಭವಿಸಿ ಲೇಖನ ಬರೆದಿದ್ದಾರೆ.

ಆ ಮಹಾಮಹಿಮನ ಜೀವನ ಸಾಧನೆ, ಭಕ್ತಿ ಮಾರ್ಗ ಪವಾಡಗಳು, ಲೋಕ ಕಲ್ಯಾಣ ಕಾರ್ಯಗಳು, ಆತ್ಮ ಕಲ್ಯಾಣಕ್ಕಾಗಿ ಸಾಧನೆಗಳು, ಜನಧರ್ಮ ಮಾರ್ಗದಲ್ಲಿ ಬದುಕಲು ತೋರಿದ ಧರ್ಮೋಪದೇಶಗಳು ನಮ್ಮನ್ನೂ ಕಣ್ಣು ತೆರೆಯಿಸುತ್ತವೆ ಎಂದಿದ್ದಾರೆ ಲೇಖಕರು.

ದಿನಾಂಕ ೦೭-೦೮-೧೯೭೨ ರಂದು ವಿಶ್ವವಾಣಿ ಪತ್ರಿಕೆಯಲ್ಲಿ ಪ್ರಕಟವಾದ ಲೇಖನ 'ಗುಡಿಸಾಗರದ ಶ್ರೀ ಸಾಧು ಸಿದ್ಧ ಶಿವಯೋಗಿಗಳು' ಈ ವಿಭೂತಿ ಪುರುಷರ ಪರಿಪೂರ್ಣ ವ್ಯಕ್ತಿತ್ವ ಇಲ್ಲಿ ಪ್ರಕಟಿತಗೊಂಡಿದೆ.

ಹಾಗೆಯೇ ಎಪ್ರೀಲ್ ೧೯೯೬ ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ 'ನಾಗರಹಳ್ಳಿಯ ಶ್ರೀ ಶರಣ ಬಸವೇಶ್ವರರ ಸಂಸಾರ ಮತ್ತು ಸನ್ಯಾಸದ ಸಮನ್ವಯ ಜೀವನದ ಸಾಧನೆಯನ್ನು ಇಲ್ಲಿ ಪರಿಚಯಿಸಿದ್ದಾರೆ. ಅದೇ ರೀತಿಯಾಗಿ ಇದೇ ದಿನಪತ್ರಿಕೆಯಲ್ಲಿ ೧೯-೦೫-೧೯೭೩ ರಂದು ಸದ್ಗುರು ಸಮರ್ಥ ಕಲ್ಮೇಶ್ವರ ಮಹಾರಾಜರ ಸಂಸಾರ ಸನ್ಯಾಸದ ಸಮನ್ವಯ ಜೀವನ, ಯೋಗಾನುಷ್ಠಾನಗಳ ಸಾಧನೆಯ ಕುರಿತ ಮಾಹಿತಿ ಹಾಗೂ ಸದ್ಗುರುವಿನ ನಿಷ್ಠ ಸೇವಕನಾಗಿ ಬದುಕಿದ ರೀತಿಯನ್ನು ಪ್ರಸ್ತುತ ಲೇಖನ ವಿವರಿಸಿದೆ.

ವಿಶ್ವವಾಣಿ ಪತ್ರಿಕೆಯಲ್ಲಿ ದಿನಾಂಕ ೧೧-೦೯-೧೯೭೨ ರಂದು 'ಗೊಬ್ಬರ ಗುಂಪಿಯ ರೇವಣ ಸಿದ್ಧೇಶ್ವರರು' ಎಂಬ ಲೇಖನ ಪ್ರಕಟಗೊಂಡಿದೆ. ಶ್ರೀ ಸಿದ್ಧೇಶ್ವರ ಶ್ರೀಗಳ ಪರಿಚಯ ಮಾಡುತ್ತಾ, ಅವರು ಸ್ಥಾಪಿಸಿದ ಮಠಗಳ ಪ್ರಸ್ತಾಪ ಮಾಡುತ್ತಾ ಅವರ ಹಠಯೋಗಿ ತನವನ್ನೂ, ಪವಾಡಗಳನ್ನು ಇಲ್ಲಿ ಲೇಖಕರು ಸಂಕ್ಷಿಪ್ತದಲ್ಲಿ ಉಲ್ಲೇಖಿಸಿದ್ದಾರೆ.

ಹಾಗೆಯೇ ದಿನಾಂಕ ೧೩-೦೫-೧೯೭೨ ರಂದು ಬ್ರಹ್ಮರ್ಷಿ ಶ್ರೀ ಬಸವಲಿಂಗ ಸ್ವಾಮಿಜಿಯವರ ಗವಿಮಠ ಮತ್ತು ಸರ್ವಧರ್ಮ ಸಮ್ಮೇಳನದ ಕುರಿತು ವಿವರಿಸಿದ್ದಾರೆ. ಇದೇ ಪತ್ರಿಕೆಯ ದಿನಾಂಕ ೧೩-೦೨-೧೯೭೨ ರಂದು ಪ್ರಕಟಿಸಿದ ಮುಕ್ತಿ ಮಂದಿರದ ಶ್ರೀ ಗಂಗಾಧರ ಜಗದ್ಗುರುಗಳು ಕುರಿತು ಲೇಖನವು ಪ್ರಕಟಗೊಂಡಿದೆ.

೧೯೭೪ ರಲ್ಲಿ 'ಮಹಾಂತ ದರ್ಶನ' ಪತ್ರಿಕೆಯಲ್ಲಿ ಮಹಂತರೆನಿಸಿದ 'ಶ್ರೀ ಮಹಾಂತ ಅಪ್ಪಗಳು'

ಎಂಬ ಶೀರ್ಷಿಕೆಯಡಿ ಲೇಖನ ಪ್ರಕಟಿತಗೊಂಡಿದೆ. ಶ್ರೀಗಳು ಶಿವಯೋಗ ಸಾಧಕರು 'ಬಿಡು ಬಾಹ್ಯದೊಳು ಡಂಭವ' ಎಂದು ಹೇಳಿದ ಸರ್ಪ ಭೂಷಣ ಶಿವಯೋಗಿಗಳ ಮಾತನ್ನು ಶ್ರೀಗಳವರು ತಮ್ಮ ಜೀವನುದ್ದಕ್ಕೂ ನಡೆಸಿಕೊಂಡು ಬಂದಿರುವದರಿಂದ ಸಮಾಜಕ್ಕೊಂದು ಆದರ್ಶವನ್ನು ಹಾಕಿ ಕೊಟ್ಟಿರುವುದರಲ್ಲಿ ಯಾವ ಸಂದೇಹವೂ ಇಲ್ಲಿ ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

'ಮುಂಡರಗಿ ಅನ್ನದಾನ ಸ್ವಾಮಿಗಳು ಅಭಿನಂದನ ಗ್ರಂಥ'ದಲ್ಲಿ ಪ್ರಕಟವಾದ ಸಿ. ವಿ. ಕೆರಿಮನಿಯವರ 'ಮುಂಡರಗಿ ಶ್ರೀ ಅನ್ನದಾನ ಸ್ವಾಮಿಗಳು' ಲೇಖನ ಪ್ರಕಟಗೊಂಡಿದೆ. ಜಗದ್ಗುರು ಶ್ರೀ ಅನ್ನದಾನೀಶ್ವರ ಮಹಾಸ್ವಾಮಿಗಳು ಆರೈದು ಭಾಗ – ೧ ರಲ್ಲಿ ಹನ್ನೊಂದು ಜನ ವಿಭೂತಿಗಳ ದರ್ಶನ ಮಾಡಿಸಿದ್ದಾರೆ. ಆರೈದು ಭಾಗ – ೨ ರಲ್ಲಿ ಹನ್ನೊಂದು ತಾತ್ವಿಕ ಲೇಖನಗಳು ತತ್ವದರ್ಶನ ಮಾಡಿಸಿದ್ದಾರೆ. ಆರೈದು ಭಾಗ – ೩ ರಲ್ಲ ಹನ್ನೊಂದು ವಿಮರ್ಶಾತ್ಮಕ ಚಿಂತನಗಳು ಒಡಮೂಡಿವೆ ಎಂದು ತಿಳಿಸಿದ ಲೇಖಕರು, ಭಾಗ – ೧ ರಲ್ಲಿಯ ಶ್ರೀವಾಣಿಯನ್ನು ಉಲ್ಲೇಖಿಸಿದ್ದಾರೆ.



**"ಆರಿಸಿಕೋ ಆರಿಸಿಕೋ ಆದಯ್ದು ಆರಿಸಿಕೋ**
**ಆರೈಯ್ಯದೆ ಗುರಿ ದೊರಕುವುದೆಂತು?**
**ಗುರಿಯಿಲ್ಲದ ಬಿಟ್ಟ ಬಾಣ ಸಾರ್ಥಕವೇ !**
**ದಾರಿಯ ನಡೆದಲ್ಲದೆ ಊರ ಸೇರುವುದೆಂತು?**
**ಮಾರಹರ ಮೃಡಗಿರಿ ಅನ್ನದಾನಿಯ**
**ಮುಟ್ಟುವ ದಾರಿಯನಾರಿಸಿಕೋ**
**– ವಚನ ಸಂಪದ – ೪೧೮.**

ಆರೈಯ್ – ವಿಚಾರಿಸು, ಹುಡುಕು, ಜಾಗ್ರತೆಯಿಂದರು, ಪರೀಕ್ಷಿಸರಿ, ಕಾಪಾಡು ಎಂಬ ಪರ್ಯಾಯ ಅರ್ಥಗಳುಂಟು ಎಂದು ಲೇಖಕರು ಅದರ ಮಾಹಿತಿ ನೀಡಿದ್ದಾರೆ.

ಗ್ರಾಮೀಣ ಮುಗ್ಧ ಭಕ್ತರಿದ್ದೆಡೆಗೆ ಸ್ವತಃ ಪೂಜ್ಯರೇ ದಯಮಾಡಿಸಿ ಅವರಿಗೆ ಉತ್ತಮ ಮಾರ್ಗದರ್ಶನ ನೀಡುತ್ತಿರುವುದನ್ನು ಅವರ ಸಮೀಪದಿಂದ ಬಲ್ಲವರೆಲ್ಲರೂ ಬಲ್ಲರೂ ಎಂದು ಹೇಳುವ ಲೇಖಕರು, ದೀನ–ದಲಿತರ, ಬಡ–ಜನತೆಯ ಗುಡಿಸಲಿನಲ್ಲೂ ತಮ್ಮ ಸರಳ, ಸಹಜ ಮಂದಸ್ಮಿತ ಮಾತುಗಳಿಂದ, ಕೃತಿಗಳಿಂದ ಶರಣರ ವಾಣಿಯಂತೆ ನಡೆ–ನುಡಿ ಒಂದಾಗಿ, ಕೋಟಿಗೊಬ್ಬ ಶರಣರ ಸಾಲಿನಲ್ಲಿ ಬರುವಂಥವರು ಶ್ರೀಗಳು ಎಂದು ಸಿ. ವಿ. ಕೆರಿಮನಿಯವರು ತಮ್ಮ ಲೇಖನದಲ್ಲಿ ಸ್ಮರಿಸಿಕೊಂಡಿದ್ದಾರೆ.

ಒಟ್ಟಾರೆಯಾಗಿ ಶರಣರ ಕಣಜವು ಅಧ್ಯಾತ್ಮಿಕ ಅನುಭೂತಿಯ ಜೊತೆಗೆ ಸಾಮಾಜಿಕ ಜಾಡ್ಯವನ್ನು ತೊಡೆದು ಹಾಕಿ ಸಮಾನತೆಯ ತಳಹದಿಯ ಮೇಲೆ ಸ್ವಸ್ಥ ಸಮಾಜದ ಹೊಂಗನಸನ್ನು ಕಂಡ ವಿಭೂತಿ ಪುರುಷರ ಮತ್ತು ಮಹಿಳೆಯರ ಸಾರ್ಥಕ ಜೀವನ ದರ್ಶನವನ್ನು ಮಾಡಿಸುತ್ತದೆ.

## ಅಧ್ಯಾಯ - ೫ :
# ಸಮಾರೋಪ

ಸಿ. ವಿ. ಕೆರಿಮನಿಯವರು ಒಬ್ಬ ಸಮರ್ಥ ಕನ್ನಡ ಪ್ರಾಧ್ಯಾಪಕರು. ಉತ್ತಮ ಬರಹಗಾರರು. ಚತುರ ಸಂಘಟಕರು ಎಲ್ಲಕ್ಕೂ ಮಿಗಿಲಾಗಿ ಉತ್ಕಟ ಸ್ನೇಹ ಜೀವಿಗಳು, ಮಾನವೀಯ ಮೌಲ್ಯಗಳು ಆರಾಧಕರು. ಅವರು ರಚಿಸಿದ ಕೃತಿಗಳಲ್ಲಿ ಸಂಶೋಧನೆ, ವಿಮರ್ಶೆ, ಜೀವನ ಚರಿತ್ರೆ, ಸಂಪಾದನೆ ಮೊದಲಾದವು ಸಮಾವೇಶಗೊಂಡಿವೆ. ಇವರು ಬರಹಗಾರರು ಬಳಗದಲ್ಲಿ ತಮ್ಮನ್ನು ಗುರುತಿಸಿಕೊಂಡರು. ಸಾಹಿತ್ಯದ ವಿಷಯುದಲ್ಲಿ ಅಸಾಧ್ಯವಾದುದ್ದನ್ನು ಸಾಧ್ಯವಮಾಡಿ ತೋರಿಸುವ ಸ್ವಭಾವ ಸಿ. ವಿ. ಕೆರಿಮನಿಯವರದು. ಅವರ ಸಾಹಿತ್ಯ ಶ್ರದ್ಧೆ, ಸಂಶೋಧನಾ ಶಕ್ತಿ, ಅಭಿವ್ಯಕ್ತಿ ಸಹಜತೆಗಳಿಗೆ ಅವರ ಕಣಜದ ಲೇಖನಗಳು ಕನ್ನಡಿ ಹಿಡಿದಿವೆ.

ಲಕ್ಷ್ಮೇಶ್ವರ ಸಾಹಿತ್ಯ ಕ್ಷೇತ್ರದಲ್ಲಿ ಆದ ಕೃಷಿಯಲ್ಲಿ, ಸಿಂಹಪಾಲು ಸಿ. ವಿ. ಕೆರಿಮನಿಯವರದು. ಪ್ರಾಚಾರ್ಯರಾಗಿ, ರೋಟರಿ ಅಧ್ಯಕ್ಷರಾಗಿ, ಗದಗ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಈ ಎಲ್ಲ ರಂಗಗಳಲ್ಲಿಯೂ ಇವರು ಸಲ್ಲಿಸಿದ ಸೇವೆ ಅನುಪಮವಾದದ್ದು ಹಾಗೂ ಅಮೋಘವಾದದ್ದು. ಸಿ. ವಿ. ಕೆರಿಮನಿಯವರ ಸ್ನೇಹ ವಲಯ ವಿಶಾಲವಾದುದು. ಸಾಹಿತಿಗಳು, ವೈದ್ಯರು, ಇಂಜನೀಯರರು, ಶಿಕ್ಷಕರು, ಕಲಾವಿದರು ಸಮಾಜ ಸೇವಾಸಕ್ತರು, ರಾಜಕಾರಣಿಗಳು, ನ್ಯಾಯವಾದಿಗಳು, ರೈತರು ಹೀಗೆ ವಿವಿಧ ಕ್ಷೇತ್ರಗಳ ಗಣ್ಯರ ಬಳಗ ಅವರದು. ಅಪಾರ ಸಾಹಿತ್ಯಿಕ ಸಾಧನೆ ಮಾಡಿದರೂ ಬೀಗದ ಸೌಜನ್ಯಶೀಲರು. ಅಂತೆಯೇ ಅವರಿಗೆ ನವಲಗುಂದ ತಾಲೂಕಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಸಂದಿದೆ.

ಸಿ. ವಿ. ಕೆರಿಮನಿಯವರು ಸಾವಿರಾರು ಉತ್ತಮ ವಿದ್ಯಾರ್ಥಿಗಳನ್ನು ತಯಾರು ಮಾಡಿದ್ದಾರೆ. ಸ್ವತಃ ಸಿ. ವಿ. ಕೆರಿಮನಿಯವರು ಹೊಸ ಹೊಸ ಬರಹಗಾರರನ್ನು, ಸಾಹಿತಿಗಳನ್ನು ಪ್ರೋತ್ಸಾಹಿಸಿ ಉತ್ತೇಜನ ನೀಡಿದ್ದಾರೆ. ಭಾರತೀಯ ಹಬ್ಬಗಳ ಬರೆಯ ಬಹುದಾದ ಸಾವಿರಾರು ಪುಟಗಳ ವಿಷಯ ವ್ಯಾಪ್ತಿಯನ್ನು ಕೆಲವೇ ಪುಟಗಳಿಗೆ ಸೀಮಿತಗೊಳಿಸಿ 'ಹಬ್ಬ' ವಿಷಯಕ್ಕೆ ಸಂಬಂಧಿಸಿದ ಯಾವ ಅಂಶವನ್ನು ವಿವರವನ್ನು ಕೈಬಿಡದೇ ಎಲ್ಲವನ್ನು ಅತ್ಯಂತ ಸಂಕ್ಷಿಪ್ತವಾಗಿ ಈ ಪುಸ್ತಕದಲ್ಲಿ ಸಂಗ್ರಹಿಸಿದ್ದು ಲೇಖಕರ ವಿವೇಚನಾ ಜಾಣ್ಮೆಗೆ, ಸಂದರ್ಭ ಔಚಿತ್ರ್ಯ ಪ್ರಜ್ಞೆಗೆ ಕನ್ನಡ ಹಿಡಿಯುತ್ತದೆ. ಕರಿಯನ್ನು ಕನ್ನಡಿಯಲ್ಲಿ ತೋರಿಸಿದಂತೆ, ಸಿಂಧುವನ್ನು ಬಿಂದುವಿನಲ್ಲಿ ಹಿಡಿದಿಟ್ಟಂತೆ

ಸಿ. ವಿ. ಕೆರಿಮನಿಯವರು ಹಬ್ಬಗಳ ಪೂರ್ವ ಪರಿಚಯವನ್ನು ಹಬ್ಬ, ಜಯಂತಿ, ರಾಷ್ಟ್ರೀಯ ಹಬ್ಬಗಳು, ಪ್ರಾದೇಶಿಕ ಹಬ್ಬಗಳು ಕುರಿತಾಗಿ ಮಹತ್ವದ ಮಾಹಿತಿಯನ್ನು ನೀಡಿದ್ದಾರೆ.

ಸಂಕ್ಷಿಪ್ತತೆಯು ಜ್ಞಾನಿಯ ಲಕ್ಷಣ ಅನ್ನುವ ಶೇಕ್ಸಪಿಯರ್‌ನ ಉದ್ಗಾರಕ್ಕೆ ಸಿ. ವಿ. ಕೆರಿಮನಿಯವರು ಉದಾಹರಣೆ ಯಾಗಿದ್ದಾರೆ. ಅಂತೆಯೇ ಒಟ್ಟಾರೆ ಸಾಹಿತ್ಯವನ್ನು ಅಧ್ಯಯನ ಮಾಡಿದಾಗ ಸಿ. ವಿ. ಕೆರಿಮನಿಯವರ ಸಂಶೋಧನಾ ಸಾಹಿತ್ಯ ಹಾಗೂ ವ್ಯಕ್ತಿ ಚಿತ್ರಣಗಳು ಸಂಕ್ಷಿಪ್ತ ವಿಷಯದ ಜೊತೆಗೆ ದೊಡ್ಡದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ತಮ್ಮ ಸುತ್ತಲಿನ ಕ್ಷೇತ್ರಗಳ ದರ್ಶನ ಹಾಗೂ ಪ್ರಚಲಿತ ಐತಿಹಾಸಿಕ ವ್ಯಕ್ತಿಗಳನ್ನು ಗುರುತಿಸುವ ಕಳಕಳಿ ಇದೆ. ಅವರ ಚಿರನೆನಪುಗಳನ್ನು ಮುಂದಿನ ಪೀಳಿಗೆಗೆ ಬಳುವಳಿಯಾಗಿ ನೀಡುವ ಸದುದ್ದೇಶದಿಂದಲೇ ಸಾಹಿತ್ಯ ಕೃತಿಗಳು ನಿರ್ಮಾಣಗೊಂಡಿವೆ.

ನಿರಂತರ ಸೇವೆಯೇ ನದಿಗಳ ಧ್ಯೇಯ. ಅದು ಪ್ರತಿಫಲ ಅಪೇಕ್ಷಿಸಿದ ಸೇವೆ. ಮಾನವನ ಬಾಳು ನದಿಗಳಂತೆ ಇರಬೇಕು ಎಂದು ಸಿ. ವಿ. ಕೆರಿಮನಿಯವರು ತಮ್ಮ ಪುಟ್ಟ ಹೊತ್ತಿಗೆಯಾದ 'ನದಿಗಳು' ಕೃತಿಯಲ್ಲಿ ನದಿಗಳ ಪರೋಪಕಾರಿ ಸೇವೆಯನ್ನು ಸ್ಮರಿಸಿದ್ದಾರೆ. ಅಂತೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಕೂಡಾ ಸಿ. ವಿ. ಕೆರಿಮನಿಯವರು ನದಿಗಳಂತೆ ಕೆಲಸ ನಿರ್ವಹಿಸಿದ್ದಾರೆ. ಇಷ್ಟು ದಿನಗಳ ಇವರ ಸಾಹಿತ್ಯ ಸೇವೆಯನ್ನು ನಿಗದಿತ ಕಾಲಮಿತಿಯೊಳಗೆ ಸಂಶೋಧನೆ ಹಾಗೂ ವ್ಯಕ್ತಿ ಚಿತ್ರಣಗಳು ಎನ್ನುವ ತಲೆಬರಹದಡಿಯಲ್ಲಿ ಪ್ರಾಮಾಣಿಕವಾಗಿ ಮಾಡಿದ್ದೇನೆ.

ಸಿ. ವಿ. ಕೆರಿಮನಿಯವರ ಸಾಹಿತ್ಯವನ್ನು ಬಗೆದಷ್ಟು, ಅಧ್ಯಯನಕ್ಕೆ ಒಳಪಡಿಸಿದಷ್ಟು ಕುತೂಹಲ ಕೆರಳಿಸುತ್ತದೆ. ಇದರ ಹೊರತಾಗಿ ಇವರ ಸಾಹಿತ್ಯವನ್ನು ವಿವಿಧ ಮಗ್ಗುಲಗಳಿಂದ ಅಧ್ಯಯನ ಮಾಡಬೇಕಾದ ಅವಶ್ಯವಿದೆ. ನನ್ನ ಅಧ್ಯಯನದ ಇತಿಮಿತಿಯಲ್ಲಿ ಕೈಕೊಂಡ ಈ ಅಧ್ಯಯನದ ಮೂಲಕ ಸ್ಫೂರ್ತಿಗೊಂಡು ಅವರ ಸಾಹಿತ್ಯ ಕೃತಿಗಳ ಅಧ್ಯಯನಗಳು ಹೆಚ್ಚೆಚ್ಚು ನಡೆದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

# ಸಿ. ವಿ. ಕೆರಿಮನಿಯವರ ಪರಿಚಯ

| | | |
|---|---|---|
| ಹೆಸರು | : | ಚನ್ನಪ್ಪ ವಿರುಪಾಕ್ಷಪ್ಪ ಕೆರಿಮನಿ |
| ಜನ್ಮ ದಿನಾಂಕ | : | ೦೮ – ೦೨ – ೧೯೪೧ |
| ವಯಸ್ಸು | : | ೭೧ ವರ್ಷ |
| ಜನ್ಮಸ್ಥಳ | : | ಧಾರವಾಡ ಜಿಲ್ಲೆಯ ನವಲಗುಂದ ತಾಲೂಕು, ಮೊರಬ ಗ್ರಾಮ |
| ಶಿಕ್ಷಣ | : | ಎಮ್.ಎ. [ಕನ್ನಡ] ೧೯೬೬ |
| ಸೇವೆ | : | ಗದಗ ಜಿಲ್ಲೆ ಲಕ್ಷ್ಮೇಶ್ವರದ ಪುರಸಭೆಯ ಕಲಾ ಮತ್ತು ವಾಣಿಜ್ಯ<br>ಮಹಾ ವಿದ್ಯಾಲಯದ ಕನ್ನಡ<br>ಪ್ರಾಧ್ಯಾಪಕರಾಗಿ ಹಾಗೂ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ಸದ್ಯ ನಿವೃತ್ತಿ. |
| ವಿಳಾಸ | : | ಸಿ. ವಿ. ಕೆರಿಮನಿ<br>'ಚಲ' ನಿಲಯ, ವಿನಾಯಕ ನಗರ,<br>ಲಕ್ಷ್ಮೇಶ್ವರ – ೫೮೨೧೧೬, ಜಿಲ್ಲೆ : ಗದಗ |

❖ **ಚಟುವಟಿಕೆಗಳು :**

1. ಸದಸ್ಯರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
2. ಹಂಪಿ ಕನ್ನಡ ವಿಶ್ವವಿದ್ಯಾಲಯದ ಆಡಳಿತ ಮಂಡಳಿಯ ಸದಸ್ಯರಾಗಿ ಸೇವೆ.
3. ೧೯೯೮ ಹಾಗೂ ೨೦೦೧ರಲ್ಲಿ ಗದಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಎರಡು ಅವಧಿಗೆ ಆಯ್ಕೆಯಾಗಿ ಸೇವೆ.
4. ೧೯೯೮ರಿಂದ ಗದಗ ಜಿಲ್ಲಾ ಕನ್ನಡ ಜಾಗೃತಿ ಸಮಿತಿ ಸದಸ್ಯ.
5. ಪ್ರಧಾನ ಸಂಪಾದಕರು, 'ಬೆಳ್ವೊಲ ಬೆಳಕು' ಸ್ಮರಣ ಸಂಚಿಕೆ, ೬೬ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ,
6. ಲಕ್ಷ್ಮೇಶ್ವರ ರೋಟರಿ ಕ್ಲಬ್ ಅಧ್ಯಕ್ಷರಾಗಿ ಆಯ್ಕೆ, [೧೯೯೮ – ೧೯೯೯].
7. ಲಕ್ಷ್ಮೇಶ್ವರ ರೋಟರಿ ಕ್ಲಬ್ ಅಧ್ಯಕ್ಷರಾಗಿ ೧೯೯೯ರಲ್ಲಿ ಸಿಂಗಾಪೂರ, ಮಲೇಷಿಯಾ, ಥೈಲ್ಯಾಂಡ್ ದೇಶಗಳ ಪ್ರವಾಸ ಕೈಗೊಂಡು ಸಿಂಗಾಪೂರದಲ್ಲಿ ಜರುಗಿದ ಜಾಗತಿಕ ರೋಟರಿ ಸಮಾವೇಶದಲ್ಲಿ ಪಾಲ್ಗೊಂಡಿದ್ದು.

8. ೧೯೯೭ರಲ್ಲಿ ನವಲಗುಂದದಲ್ಲಿ ಜರುಗಿದ ತಾಲೂಕು ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಆಯ್ಕೆ.

9. ೧೯೯೮ರಲ್ಲಿ ಬಾಲೇಹೊಸೂರಿನಲ್ಲಿ ಜರುಗಿದ ಶಿರಹಟ್ಟಿ ತಾಲೂಕು ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿ ಸಮ್ಮೇಳನವನ್ನು ಯಶಸ್ವಿಯಾಗಿ ನಿರ್ವಹಿಸಿದ್ದು.

10. ೨೦೦೦ದಲ್ಲಿ ಮುಂಡರಗಿಯಲ್ಲಿ ಜರುಗಿದ ಗದಗ ಜಿಲ್ಲಾ ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿ ಸಮ್ಮೇಳನವನ್ನು ಯಶಸ್ವಿಯಾಗಿ ನಿರ್ವಹಿಸಿದ್ದು.

11. ೨೦೦೪ರಲ್ಲಿ ಲಕ್ಷ್ಮೇಶ್ವರದಲ್ಲಿ ಜರುಗಿದ ಗದಗ ಜಿಲ್ಲಾ ದ್ವಿತೀಯ ಸಾಹಿತ್ಯ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿ ಸಮ್ಮೇಳನವನ್ನು ಯಶಸ್ವಿಯಾಗಿ ನಿರ್ವಹಿಸಿದ್ದು.

12. ೬೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯಲ್ಲಿ ಭಾಗವಹಿಸುವಿಕೆ. [ಮಂಗಳೂರು – ೧೯೯೮]

13. ನರಗುಂದದಲ್ಲಿ ಜರುಗಿದ ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಪ್ರಬಂಧ ಕವಿಗೋಷ್ಠಿಯಲ್ಲಿ ಭಾಗವಹಿಸುವಿಕೆ.

14. ರಾಷ್ಟ್ರೀಯ ಸಾಕ್ಷರತಾ ಆಂದೋಲನದಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಧಾರವಾಡ ಜಿಲ್ಲೆಯಲ್ಲಿ ಸೇವೆ. [೧೯೯೩ – ೧೯೯೫]

15. ಅಧ್ಯಕ್ಷರು, ಶಿರಹಟ್ಟಿ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು, ೧೯೭೪ರಿಂದ ೧೯೯೮ರವರೆಗೆ.

16. ಕರ್ನಾಟಕ ವಿಶ್ವವಿದ್ಯಾಲಯದ ಕಾಲೇಜು ಶಿಕ್ಷಕರ ಸಂಘದ ಉಪಾಧ್ಯಕ್ಷ [೧೯೯೬ – ೧೯೯೭]

17. ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಯ ಚೇರ್‌ಮನ್, ಪಾಲಕರ ಸಂಘ [೧೯೮೯ – ೧೯೯೦].

18. ನವಲಗುಂದದಲ್ಲಿ ೨೦೦೦ನೇ ಇಸ್ವಿಯಲ್ಲಿ ಜರುಗಿದ ಸರ್ವಧರ್ಮ ಸಮ್ಮೇಳನದ ಸರ್ವಾಧ್ಯಕ್ಷತೆ ವಹಿಸಿದ್ದು.

19. ಕರ್ನಾಟಕ ವಿಶ್ವವಿದ್ಯಾಲಯದ ಅಕಾಡೆಮಿ ಕೌನ್ಸಲ್ ಸದಸ್ಯರಾಗಿ ಸೇವೆ.

20. ಕರ್ನಾಟಕ ವಿಶ್ವವಿದ್ಯಾಲಯದ ಅಭ್ಯಾಸ ಮಂಡಳಿಯ ಸದಸ್ಯರಾಗಿ ಸೇವೆ. [ಪದವಿ ಮಟ್ಟದ] ಕರ್ನಾಟಕ ವಿಶ್ವವಿದ್ಯಾಲಯದ ಪದವಿ ಪರೀಕ್ಷೆಗಳ ಚೇರ್‌ಮನ್‌ರಾಗಿ ಸೇವೆ. [ಕನ್ನಡ ವಿಷಯ].

21. ೨೦೧೧ರಲ್ಲಿ ಗದಗದಲ್ಲಿ ಜರುಗಿದ ೭೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ "ಗದಗ ಜಿಲ್ಲಾ ದರ್ಶನ ಗೋಷ್ಠಿ"ಯ ಅಧ್ಯಕ್ಷತೆ.

22. ಅಧ್ಯಕ್ಷತೆ 'ಗದಗ ಜಿಲ್ಲಾ ದರ್ಶನ' ೪ನೇ ಗದಗ ಜಿಲ್ಲಾ ಸಾಹಿತ್ಯ ಸಮ್ಮೇಳನ, ಗಜೇಂದ್ರಗಡ.

 **ಪ್ರಶಸ್ತಿಗಳು :**

1. "ಶರೀಫ ಪ್ರಶಸ್ತಿ" ಸಾಹಿತ್ಯ ಸೇವೆಗಾಗಿ.
2. "ಉತ್ತಮ ಎನ್.ಎಸ್.ಎಸ್. ಅಧಿಕಾರಿ ಪ್ರಶಸ್ತಿ" ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೧೯೮೮ರಲ್ಲಿ.
3. ಉತ್ತಮ ರೋಟರಿ ಕ್ಲಬ್ ಅಧ್ಯಕ್ಷ – ೧೯೯೮ – ೧೯೯೯.
4. "ರಾಜ್ಯಮಟ್ಟದ ಮನುಕುಲ ಪ್ರಶಸ್ತಿ" ಮನುಕುಲ ಟ್ರಸ್ಟ್, ಗುಲಬರ್ಗಾ ಸಾಹಿತ್ಯ ಸೇವೆಗಾಗಿ – ೨೦೦೦ರಲ್ಲಿ.
5. "ಅಮೊಘವರ್ಷ ನೃಪತುಂಗ" ರಾಜ್ಯ ಪ್ರಶಸ್ತಿ – ೨೦೦೬"
6. ೭೭ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ, ಬೆಂಗಳೂರು, ಸಾಹಿತ್ಯ ಸೇವೆಗಾಗಿ ಸನ್ಮಾನ.
7. ಸಾಹಿತ್ಯ ಸೇವೆಗಾಗಿ ಮಠ ಮಾನ್ಯಗಳು, ಸಂಸ್ಥೆಗಳಿಂದ ಸನ್ಮಾನ.
8. ೨೦೧೨ ನೇ ಸಾಲಿನ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ.

 **ಕೃತಿಗಳು :**

1. ಭಾರತೀಯ ಹಬ್ಬಗಳು : ಕ.ವಿ.ವಿ. ಪ್ರಸಾರಾಂಗ, ಧಾರವಾಡ. ೧೯೬೯
2. ತಿರುಳ್ಗನ್ನಡ ನಾಡು ಪುಲಿಗೆರೆ: ಪಂಪ ಪ್ರಕಾಶನ, ಲಕ್ಷ್ಮೇಶ್ವರ ೧೯೭೨
3. ಷಡಕ್ಷರದೇವ : ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನ, ಬೆಂಗಳೂರು ೧೯೭೩
4. ಪುಲಿಗೆರೆ : ಐ.ಬಿ.ಎಚ್. ಪ್ರಕಾಶನ, ಬೆಂಗಳೂರು. ೧೯೭೪
5. ವೀರಶೈವ ಸಾಹಿತ್ಯ ಸಮೀಕ್ಷೆ: ಪಂಪ ಪ್ರಕಾಶನ, ಲಕ್ಷ್ಮೇಶ್ವರ. ೧೯೭೬
   [ಎಮ್.ಎ. ಕನ್ನಡ ಅಧ್ಯಯನ ಗ್ರಂಥವಾಗಿದೆ. ಕ.ವಿ.ವಿ.]
6. ವಿಷ್ಣು ಶಾಸ್ತ್ರೀ ಚಿಪಳೂಣಕರ : ಭಾರತ ಭಾರತಿ [ರಾಷ್ಟ್ರೋತ್ಥಾನ] ಬೆಂಗಳೂರು ೧೯೭೬
7. ನಮ್ಮವರು ಬದುಕು [ಜಾನಪದ]: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೨

| | | | |
|---|---|---|---|
| 8. | ಹುತಾತ್ಮ ಮೈಲಾರ ಮಹದೇವ: | | ತೋಂಟದಾರ್ಯ ಮಠ, ಗದಗ [ಚಲನಚಿತ್ರವಾಗುತ್ತಿದೆ] ೧೯೭೮ |
| 9. | ಗೊಮ್ಮಟ ದರ್ಶನ | : | ಕವಿರಾಜ ಪಬ್ಲಿಕೇಷನ್, ಲಕ್ಷ್ಮೇಶ್ವರ. ೧೯೮೧ |
| 10. | ನದಿಗಳು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೭೯ |
| 11. | ನಾಗರಹಳ್ಳಿ ಶ್ರೀಶರಣ ಬಸವೇಶ್ವರರು | : | ಕ.ವಿ.ವಿ. ಪ್ರಸಾರಾಂಗ, ಧಾರವಾಡ. ೧೯೯೭ |
| 12. | ಭೀಷ್ಮ ಪರ್ವ ಸಂಗ್ರಹ | : | ಕ.ವಿ.ವಿ. ಪ್ರಸಾರಾಂಗ, ಧಾರವಾಡ. ೧೯೯೫ [ಬಿ.ಎ. ಭಾಗ – ೨, ಪಠ್ಯಪುಸ್ತಕವಾಗಿದೆ.] |
| 13. | ಕಣಜ | : | ಶ್ರೀ ಸೋಮೇಶ್ವರ ಪ್ರಕಾಶನ, ಲಕ್ಷ್ಮೇಶ್ವರ . ೨೦೦೦ |
| 14. | ಪ್ರೊ. ಎಮ್. ಎಸ್. ಸುಂಕಾಪೂರ | : | ಹಂಪಿ ಕನ್ನಡ ವಿಶ್ವವಿದ್ಯಾಲಯ. ೨೦೦೬ |
| 15. | ಶ್ರೀ ಅಂದಾನೆಪ್ಪ ದೊಡ್ಡಮೇಟಿ: | | ರಾಜ್ಯ ಗ್ರಂಥಾಲಯ ಸಮಿತಿ, ಬೆಂಗಳೂರು. ೨೦೦೯ |
| 16. | ಸರ್ ಸಿದ್ದಪ್ಪ ಕಂಬಳಿ | : | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ೨೦೧೨ |

## ❖ ಸಂಪಾದನೆ :

| | | | |
|---|---|---|---|
| 1. | ನಗರ ಸೇವಾ | : | ಪುರಸಭೆ ಲಕ್ಷ್ಮೇಶ್ವರ ಶತಮಾನೋತ್ಸವ ಸಮಿತಿ. ೧೯೭೭ |
| 2. | ಹಿರಿಯಣ್ಣ | : | ಶ್ರೀ ನಿಂಗಪ್ಪ ಕೂರಗುಂದ ಅಭಿನಂದನಾ ಸಮಿತಿ ೧೯೮೪ |
| 3. | ಧರ್ಮದಳ | : | ಶ್ರೀ ತಾ. ಪಾ. ಮ. ಬಳಗದ ರಜತ ಹಬ್ಬದ ಸಮಾರಂಭದ ಸಮಿತಿ ೧೯೮೮ |
| 4. | ಯಜಮಾನರು | : | ಶ್ರೀ ಜಿ. ಎಫ್. ಉಪನಾಳ ಅಭಿನಂದನಾ ಸಮಿತಿ, ೧೯೯೨ |
| 5. | ಸ್ವಯಂಪ್ರಭೆ | : | ಶ್ರೀ ಜಿ. ಎಫ್. ಉಪನಾಳ ಪ್ರತಿಷ್ಠಾನ, ಲಕ್ಷ್ಮೇಶ್ವರ ೧೯೯೩ |
| 6. | ಗದಗ ಜಿಲ್ಲೆಯ ಬರಹಗಾರರು: | | ಗದಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಗದಗ ೨೦೦೦ |

7. ಗದಗ ಜಿಲ್ಲೆಯ ಕಲಾವಿದರು: ಗದಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಗದಗ ೨೦೦೪

8. ಗದಗ ಜಿಲ್ಲಾ ಕಥಾ ಸಂಕಲನ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೪

9. ಗದಗ ಜಿಲ್ಲೆ ಒಂದು ಅಧ್ಯಯನ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೨

10. ಬಾರೋ ಬಾರೋ ಚಂದ್ರಾಮ : ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೨ [ಜಾನಪದ]

11. ಬೆಳ್ವೊಲ ಬೆಳಕು : ಸ್ವಾಗತ ಸಮಿತಿ ೭೬ನೇ ಅಖಿಲ ಭಾರತ ೨೦೧೧ ಕನ್ನಡ ಸಾಹಿತ್ಯ ಸಮ್ಮೇಳನ, ಗದಗ.

12. ಚಲುವ ಕನ್ನಡ : ಸ್ವಪ್ನ ಬುಕ್ ಹೌಸ ಬೆಂಗಳೂರು. ೨೦೧೨.

## ❖ ಅಭಿನಂದನಾ ಗ್ರಂಥಗಳು :

1. ಚನ್ನಚೇತನ : ಶ್ರೀ ಸೋಮೇಶ್ವರ ಪ್ರಕಾಶನ, ಲಕ್ಷ್ಮೇಶ್ವರ . ೨೦೦೧ [೬೦ನೇ ವರ್ಷದ ಹುಟ್ಟು ಹಬ್ಬದ ಸವಿ ನೆನಪಿಗಾಗಿ]

2. ವಚನ ಸಾಹಿತ್ಯ ದರ್ಶನ : ಶ್ರೀ ಸೋಮೇಶ್ವರ ಪ್ರಕಾಶನ, ಲಕ್ಷ್ಮೇಶ್ವರ . ೨೦೦೧ [೬೦ನೇ ವರ್ಷದ ಹುಟ್ಟು ಹಬ್ಬದ ಸವಿ ನೆನಪಿಗಾಗಿ]

* * * * *



ಸಿ. ವಿ. ಕೆರಿಮನಿಯವರು



ಉಪನ್ಯಾಸಕರಾಗಿ ಪ್ರಥಮ ಸಮಾರಂಭದಲ್ಲಿ ಉಪನ್ಯಾಸ



ವಾರ್ಷಿಕ ಸ್ನೇಹ ಸಮ್ಮೇಳನ ಸಂಚಾಲಕರಾಗಿ ಕುಲಪ
ಡಾ. ಎ.ಎನ್. ಅಡಕೆ ಅವರೊಂದಿಗೆ



ಲಿಗೆರೆ' ಗ್ರಂಥ ರಚನೆಗಾಗಿ ಸಚಿವ ಕೆ.ಎಚ್. ರಂಗನಾಥ
ಅವರಿಂದ ಸನ್ಮಾನ (1971)



'ವೀರಶೈವ ಸಾಹಿತ್ಯ ಸಮೀಕ್ಷೆ' ಗ್ರಂಥ ಬಿಡುಗಡೆ
ಸಮಾರಂಭದಲ್ಲಿ ಕವಿ ಗೋಪಾಲಕೃಷ್ಣ ಅಡಿಗರಿಂದ ಸ



ತ್ತಮ ಎನ್.ಎಸ್.ಎಸ್. ಅಧಿಕಾರಿ' ಪ್ರಶಸ್ತಿ ಕ.ವಿ.ವಿ.ಕುಲ
ಡಾ. ವಿ.ವಿ. ಬಡಿಗೇರ ಅವರಿಂದ ಸ್ವೀಕಾರ (1989–90)



ಕವಿವಿಯ ಎನ್.ಎಸ್.ಎಸ್. ಘಟಕ ನೇತೃತ್ವ ವಹಿ
ಕಲ್ಕತ್ತಾದಲ್ಲಿ ಜರುಗಿದ ಸಮ್ಮೇಳನದಲ್ಲಿ (1988)



ಶಿರಹಟ್ಟಿ ತಾಲೂಕು ಪ್ರಪ್ರಥಮ ಕನ್ನಡ ಸಾಹಿತ್ಯ
ಮ್ಮೇಳನವನ್ನು ಉದ್ದೇಶಿಸಿ ಮಾತನಾಡುತ್ತಿರುವುದು.




ನವಲಗುಂದ ತಾಲೂಕು ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷ
ಶಾಸಕ ಕೆ.ಎನ್. ಗಡ್ಡಿ ಅವರೊಂದಿಗೆ ಜ್ಯೋತಿ ಬೆಳಗಿಸುತ್ತಿರು



ರಿ ಕ್ಲಬ್ ಅಧ್ಯಕ್ಷರಾಗಿ ಅಧಿಕಾರ ಗ್ರಹಣ ಸಮಾರಂಭದಲ್ಲಿ
ಸಚಿವ ಎಚ್.ಕೆ. ಪಾಟೀಲ ಅವರೊಂದಿಗೆ.




ಸಿಂಗಪುರದಲ್ಲಿ ಜರುಗಿದ ರೋಟರಿ ಸಮ್ಮೇಳನದ
ಡಾ. ರಾಜನ್ ದೇಶಪಾಂಡೆ ಅವರೊಂದಿಗೆ



ನ್ನಡ ವಿ.ವಿ. ಹಂಪಿ ನುಡಿ ಹಬ್ಬ ಮೆರವಣಿಗೆಯಲ್ಲಿ.



ಕನ್ನಡ ವಿ.ವಿ. ಹಂಪಿಯ ಹಸ್ತಪ್ರತಿ ಸಮ್ಮೇಳನ
ಉದ್ದೇಶಿಸಿ ಮಾತನಾಡುತ್ತಿರುವುದು.



ನ್ನಡ ಪುಸ್ತಕ ಪ್ರಾಧಿಕಾರದ ಡಾ. ಜಿ.ಪಿ. ರಾಜರತ್ನಂ
ಹಿತ್ಯ ಪರಿಚಾರಕ ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ
ಮಾತನಾಡುತ್ತಿರುವುದು



ಹಾವೇರಿಯಲ್ಲಿ ಜರುಗಿದ ಬೇಂದ್ರೆ ವಿಚಾರ ಸಂಕಿರಣ
ಸಚಿವ ಉದಾಸಿ ಸಚಿವ ಬೊಮ್ಮಾಯಿ, ಶಾಸಕ ನೆ
ಓಲೇಕಾರ ಹಾಗೂ ಶಿವರಾಜ ಸಜ್ಜನರೊಂದಿಗೆ



ನವಲಗುಂದದಲ್ಲಿ ಜರುಗಿದ ರಾಜ್ಯ ಮಟ್ಟದ
ವಿಚಾರ ಸಂಕಿರಣದಲ್ಲಿ



ಕನ್ನಡ ಪುಸ್ತಕ ಪ್ರಾಧಿಕಾರದಿಂದ ಸನ್ಮಾನ



ಗದಗದಲ್ಲಿ ಜರುಗಿದ 'ನಾನು ಮೆಚ್ಚಿದ ಪುಸ್ತಕ'
ಕಾರ್ಯಕ್ರಮದಲ್ಲಿ



ಉಚಿತ ಪುಸ್ತಕ ವಿತರಣಾ ಸಮಾರಂಭದಲ್ಲಿ



ಗದಗ ಜಿಲ್ಲಾ ಅಧ್ಯಕ್ಷರಾಗಿ ಆಯ್ಕೆಗೊಂಡ
ಸಂದರ್ಭದಲ್ಲಿ



ಗದಗ ಜಿಲ್ಲಾ ಕಸಾಪ ಕಾರ್ಯಾವಧಿ ಉದ್ಘಾಟಿಸುತ್ತಿರುವ ಎಸ್. ಬಸವ
ಜಗದ್ಗುರು ಡಾ. ತೋಂಟದ ಸಿದ್ಧಲಿಂಗಸ್ವಾಮಿಗಳು ಪಾಟೀಲ ಪು
ಗಿರಡ್ಡಿ ಗೋವಿಂದರಾಜರೊಂದಿಗೆ (1998)




ಗದಗ ಜಿಲ್ಲಾ ಕಸಾಪದ ಜನಪ್ರಿಯ
ಮನೆ ಮನೆಯಲ್ಲಿ ಸಾಹಿತ್ಯ ಗೋಷ್ಠಿಯಲ್ಲಿ



ಮೂಡಬಿದಿರೆ ಸಾಹಿತ್ಯ ಸಮ್ಮೇಳನದಲ್ಲಿ ಡಾ. ವೀರೇ
ಹೆಗ್ಗಡೆಯವರಿಂದ ನೆನಪಿನ ಕಾಣಿಕೆ ಸ್ವೀಕಾರ



ರಗಿಯಲ್ಲಿ ಜರುಗಿದ ಪ್ರಥಮ ಗದಗ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ
ರಾಣಿ ಸತೀಶ, ಸಚಿವ ಎಚ್.ಕೆ. ಪಾಟೀಲ, ಶಾಸಕ ಎಸ್. ಎಸ್.
ಪಾಟೀಲ, ಸರ್ವಾಧ್ಯಕ್ಷ ಗಿರಡ್ಡಿ ಗೋವಿಂದರಾಜರೊಂದಿಗೆ



ಕಾವ್ಯ ಸಹೃದಯತಾ ಶಿಬಿರದಲ್ಲಿ
ಕೀರ್ತಿನಾಥ ಕುರ್ತಕೋಟಿ
ಆಯ್. ಜಿ. ಸನದಿಯವರೊಂದಿಗೆ



ಪ ಕಾರ್ಯಾವಧಿ ಉದ್ಘಾಟನಾ ಸಮಾರಂಭದಲ್ಲಿ ಕನ್ನಡ
.ವಿ. ಕುಲಪತಿ ಡಾ. ಎಚ್. ಜೆ. ಲಕ್ಕಪ್ಪಗೌಡ ಶಾಸಕ
ಜಿ. ಎಸ್. ಗಡ್ಡದ್ದೇವರಮಠರೊಂದಿಗೆ (2001)



ಲಕ್ಷ್ಮೇಶ್ವರದಲ್ಲಿ ಜರುಗಿದ ದ್ವಿತೀಯ ಕನ್ನಡ ಸಾಹಿತ್ಯ
ಸಮ್ಮೇಳನ ಉದ್ಘಾಟನಾ ಸಮಾರಂಭದಲ್ಲಿ




ಡ ಸಂಸ್ಕೃತಿ ಶಿಬಿರದಲ್ಲಿ ಕಸಾಪ ರಾಜ್ಯಾಧ್ಯಕ್ಷ ಹರಿಕೃಷ್ಣ
ಪುನರೂರರೊಂದಿಗೆ



ಕಸಾಪ ವತಿಯಿಂದ ಜನಪ್ರತಿನಿಧಿಗಳಿಗೆ
ಸನ್ಮಾನ ಸಮಾರಂಭದಲ್ಲಿ



ಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಒತ್ತಾಯಿಸಿ ಗದಗ
ಜಿಲ್ಲಾಧಿಕಾರಿ ಪಿ. ಆರ್. ಪಟೇಲರಿಗೆ ಜಿಲ್ಲಾ ಕಸಾಪ
ನಿಯೋಗದೊಂದಿಗೆ ಮನವಿ



'ಗದಗ ಜಿಲ್ಲಾ ಬರಹಗಾರರು' ಪುಸ್ತಕ ಬಿಡುಗಡೆ ಸಂದರ್ಭ
ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಸ್ವಾಮಿಗಳೊಂ




ರ್ಣಟಕ ವಿದ್ಯಾವರ್ಧಕ ಶತಮಾನೋತ್ಸವದಲ್ಲಿ – 1890




ಬೇಂದ್ರೆ ಸಂಗೀತ ಲಹರಿ ಕಾರ್ಯಕ್ರಮದಲ್ಲಿ
ಗಂಗೂಬಾಯಿ ಹಾನಗಲ್ಲ ಅವರೊಂದಿಗೆ



ಜಮಾನ' ಗ್ರಂಥ ಬಿಡುಗಡೆ, ಉಡುಪಿ ಪೇಜಾವರಮಠ
ಶ್ರೀಗಳಾದ ವಿಶ್ವೇಶ್ವರತೀರ್ಥ ಪಾದಂಗಳವರಿಂದ




ಕರ್ನಾಟಕ ರಕ್ಷಣಾ ವೇದಿಕೆ ಕಾರ್ಯಕ್ರಮದಲ್ಲಿ




ಅಮೋಘ ಪರ್ವ ನೃಪತುಂಗ ಪ್ರಶಸ್ತಿ–2006ರಲ್ಲಿ



ಲಕ್ಷ್ಮೇಶ್ವರದ ಶ್ರೀ ಸೋಮೇಶ್ವರ ದೇವಾಲಯದ ಮಾ
ಇನ್ಫೋಸಿಸ್‌ನ ಸುಧಾಮೂರ್ತಿಯವರಿಗೆ ನೀಡುತ್ತಿರು



ಷಷ್ಠ್ಯಬ್ದಿ ಪೂರ್ತಿ ಸಮಾರಂಭದಲ್ಲಿ ರಂಭಾಪುರಿ
ಶ್ರೀಗಳಿಂದ ಸನ್ಮಾನ



ಷಷ್ಠ್ಯಬ್ದಿ ಸಮಾರಂಭ ಉದ್ದೇಶಿಸಿ ಮಾತನಾಡುತ್ತಿರು



ಅಂದಾನೆಪ್ಪ ದೊಡ್ಡಮೇಟಿ ಗ್ರಂಥ ರಚನೆಗಾಗಿ ಸನ್ಮಾನ,
ಸಭಾಪತಿ ವೀರಣ್ಣ ಮತ್ತಿಕಟ್ಟಿ, ಮುಖ್ಯಮಂತ್ರಿ
ಸ್. ಯಡಿಯೂರಪ್ಪ, ಸಚಿವ ಜಗದೀಶ ಶೆಟ್ಟರ ಅವರೊಂದಿಗೆ



ಲಕ್ಷ್ಮೇಶ್ವರ ಶ್ರೀ ಸೋಮೇಶ್ವರ ದೇವಾಲಯಕ್ಕೆ ಭೇಟಿ
ಸಾಹಿತಿ ಪಾಟೀಲ ಪುಟ್ಟಪ್ಪರೊಂದಿಗೆ ಸಮಾಲೋಚನೆ



ಾಪ ವತಿಯಿಂದ ಬೆಂಗಳೂರು ಸಾಹಿತ್ಯ ಸಮ್ಮೇಳನದಲ್ಲಿ
ಸನ್ಮಾನ, ಶ್ರೀ ಡಿ. ಎಚ್. ಶಂಕರಮೂರ್ತಿ,
ಡಾ. ನಲ್ಲೂರ ಪ್ರಸಾದ ಅವರೊಂದಿಗೆ



'ರಾಜ್ಯ ಮನುಕುಲ ಪ್ರಶಸ್ತಿ' ಸ್ವೀಕಾರ ಸಮಾರಂಭದ
2002–2003

# ಹೈದ್ರಾಬಾದ್ ಕರ್ನಾಟಕ ನಾಗರೀಕರ ವೇದಿಕೆ

ಬೆಂಗಳೂರು







## ಅಮೋಘವರ್ಷ ನೃಪತುಂಗ ಪ್ರಶಸ್ತಿ

2006

ಶ್ರೀ ......ಪ್ರೊ|| ಬಿ. ಬಿ. ಕೆರಿಮನಿ ಲಕ್ಷ್ಮೇಶ್ವರ...... ರವರಿಗೆ

ಕನ್ನಡ ನಾಡಿನ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿ

..........ಸಾಹಿತ್ಯ ಸಂಶೋಧನೆ..............

ಕ್ಷೇತ್ರದಲ್ಲಿ ಗುರುತರವಾದ ಸೇವೆ ಸಲ್ಲಿಸಿದ ಹಿನ್ನಲೆಯಲ್ಲಿ

ಈ ಪ್ರಶಸ್ತಿ ಪತ್ರವನ್ನು ನೀಡಲಾಗಿದೆ.



"ಅಮೋಘವರ್ಷ ನೃಪತುಂಗ" ರಾಜ್ಯ ಪ್ರಶಸ್ತಿ–2006"



## KARNATAK UNIVERSITY, DHARWAD
NATIONAL SERVICE SCHEME





### CERTIFICATE

This is to certify that Shri/Smt C. V. Kerimani

of Muncipal Arts College Laxmeshwar

has been adjudged as University level BEST NSS PROGRAMME OFFICER for the year 1989-90

Date : Dharwad

Programme Co-ordinator, National Service Scheme

Vice-Chancellor, Karnatak University, Dharwad

"ಉತ್ತಮ ಎನ್.ಎಸ್.ಎಸ್. ಅಧಿಕಾರಿ ಪ್ರಶಸ್ತಿ" ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–1988ರಲ್ಲಿ

Rotary International

PRESIDENTIAL CITATION TO FOLLOW YOUR ROTARY DREAM

AWARDED TO Rn. C. V. KERIMANI

*The Rotary Club of Lakshmeshwar*

For outstanding club participation in the Four Avenues of Service




DR. RAJAN DESHPANDE

ಉತ್ತಮ ರೋಟರಿ ಕ್ಲಬ್ ಅಧ್ಯಕ್ಷ–1998–1999



ಕರ್ನಾಟಕ ಸರಕಾರ

## ಲಕ್ಕುಂಡಿ ಉತ್ಸವ-೨೦೦೯



ಗದಗ ಜಿಲ್ಲೆ

## ಅಭಿನಂದನಾ ಪತ್ರ

ಶ್ರೀಮತಿ/ಶ್ರೀ ಪ್ರೊ. ಸಿ. ವಿ. ಕೆರಿಮನಿ. ಸಾಹಿತಿಗಳು ಲಕ್ಷ್ಮೇಶ್ವರ

__________ ಇವರು

೬, ೭, ೮ ಮತ್ತು ೯ ಫೆಬ್ರುವರಿ ೨೦೦೯ ರಂದು ಜರುಗಿದ ಲಕ್ಕುಂಡಿ ಉತ್ಸವದಲ್ಲಿ

ಕಾರ್ಯಕ್ರಮ ನೀಡಿದ್ದಕ್ಕಾಗಿ/ಭಾಗವಹಿಸಿದ್ದಕ್ಕಾಗಿ ಗೌರವ ಹಾಗೂ ಅಭಿಮಾನಪೂರ್ವಕವಾಗಿ ಈ ಅಭಿನಂದನಾ ಪತ್ರ ನೀಡಲಾಗಿದೆ.





ಸುಬೋಧ ಯಾದವ ಭಾ.ಆ.ಸೇ.
ಜಿಲ್ಲಾಧಿಕಾರಿಗಳು, ಗದಗ ಹಾಗೂ
ಅಧ್ಯಕ್ಷರು, ಲಕ್ಕುಂಡಿ ಉತ್ಸವ ಸಮಿತಿ, ಗದಗ.



ಸಾಹಿತ್ಯ ಸೇವೆಗಾಗಿ ಮಠ ಮಾನ್ಯಗಳು, ಸಂಸ್ಥೆಗಳಿಂದ ಸನ್ಮಾನ.